# ಹೋಮ-ಹವನ

ವಿಧಿವಿಧಾನಗಳ ಪರಿಚಯಾತ್ಮಕ ಕೈಪಿಡಿ



ಡಾ॥ ಹೆಚ್. ಸತ್ಯನಾರಾಯಣಾಚಾರ್ಯ

ಪ್ರಕಾಶಕರು
ಶ್ರೀರಾಘವೇಂದ್ರ ದರ್ಶನ ಕೇಂದ್ರ
ಬೆಂಗಳೂರು

# ಹೋಮ – ಹವನ

(ವಿಧಿವಿಧಾನಗಳ ಪರಿಚಯಾತ್ಮಕ ಕೈಪಿಡಿ)

ಲೇಖಕರು

ಡಾ|| ಹೆಚ್. ಸತ್ಯನಾರಾಯಣಾಚಾರ್ಯ

ಪ್ರಕಾಶಕರು

ಶ್ರೀರಾಘವೇಂದ್ರ ದರ್ಶನಕೇಂದ್ರ

ವಿಜಯನಗರ

ಬೆಂಗಳೂರು – 560 040

ದೂರವಾಣಿ : 080–23402528

# HOMA - HAVANA

(A Manual of Rituals - Homa-Havana)

by : **Dr. H. Sathyanarayanacharya**

**Published by :**
**Sri Raghavendra Darshana Kendra**
Under the auspices of
Sri Raghavendra Swamy Mutt
Kengeri Upanagara
Bangalore - 560 060
Phone : 080-23402528
080-28484205

**Total pages : 208**
**Price :**

First Edition : November 2012
Copies : 2000

Cover Design : K. M. Sheshagiri

Printed at : Parishree Printers
# 9, 4th Cross, Nagappa Block,
Srirampuram, Bangalore - 560 021
Phone : 080-2312 8286, 3201 6398
email: info@parishree.com; www.parishree.com

## ಅನುಗ್ರಹ ಸಂದೇಶ

**ಶ್ರೀಪೇಜಾವರ ಅಧೋಕ್ಷಜಮಠ**
**ಶ್ರೀಜಗದ್ಗುರು ಶ್ರೀಮಧ್ವಾಚಾರ್ಯ ಮಹಾಸಂಸ್ಥಾನ**
**ರಥಬೀದಿ- ಉಡುಪಿ - 576101**



**ಉಪಸರ್ಗೇಷು ಜಾತೇಷು ದೈವಭೂತಾತ್ಮಹೇತುಷು ।**
**ಆಯುಷೇ ವಾಥ ಶಾಂತ್ಯೈ ವಾ ಶ್ರಿಯೇ ವಾ ಪುಣ್ಯವೃದ್ಧಯೇ ॥**
**ಯೋಗ್ಯತಾಯೈ ಮಂತ್ರಸಿದ್ಧ್ಯೈ ವಿಷ್ಣೋಃ ಪ್ರೀತ್ಯರ್ಥಮೇವ ವಾ ।**
**ಜುಹುಯಾತ್ ಸಹಸ್ರಮಯುತಂ ಲಕ್ಷಂ ಕೋಟಿಮಥಾಪಿ ವಾ ॥**

ಭೂಕಂಪ, ಅತಿವೃಷ್ಟಿ ಮುಂತಾದ ಯವುದೇ ವಿಧದ ಬಾಧೆಗಳು ಬಂದಾಗ ಅವುಗಳ ಪರಿಹಾರಕ್ಕಾಗಿ, ಆಯುಸ್ಸಿನ ವೃದ್ಧಿ, ಶಾಂತಿ, ಸಂಪತ್ತು, ಪುಣ್ಯಪ್ರಾಪ್ತಿ, ಯೋಗ್ಯತೆಯ ಪ್ರಾಪ್ತಿ, ವಿಷ್ಣುಪ್ರೀತಿಗಾಗಿ ಪರಮಾತ್ಮನನ್ನು ಧ್ಯಾನಿಸಿ ಹೋಮವನ್ನು ಮಾಡಬೇಕು. ಹೀಗೆ ಶ್ರೀಮಧ್ವಾಚಾರ್ಯರು ಆದೇಶವನ್ನು ನೀಡಿದ್ದಾರೆ.

ನಮ್ಮಲ್ಲಿ ಅಧ್ಯಯನ ಮಾಡಿದ ಸತ್ಯನಾರಾಯಣಾಚಾರ್ಯರು ನ್ಯಾಯವೇದಾಂತ ಶಾಸ್ತ್ರಗಳಲ್ಲಿ ಆಳವಾದ ಪರಿಣತಿಯನ್ನು ಪಡೆದ ಉತ್ತಮ

ವಿದ್ವಾಂಸರು. ಅನೇಕ ಧರ್ಮಶಾಸ್ತ್ರಗ್ರಂಥಗಳ ಅಧ್ಯಯನವನ್ನು ಮಾಡಿರುವ ಅವರು ಪೂರ್ವಾಪರ ವಿಮರ್ಶೆಯನ್ನು ಮಾಡಿ ಈ ಕೃತಿಯನ್ನು ರಚಿಸಿದ್ದಾರೆ.

**"ಶ್ರೀರಾಘವೇಂದ್ರ ದರ್ಶನಕೇಂದ್ರ"** ಸಮಾಜಕ್ಕೆ ಉಪಯುಕ್ತವಾದ ಈ ಮೌಲಿಕಕೃತಿಯನ್ನು ಪ್ರಕಾಶನ ಮಾಡುತ್ತಿರುವುದು ಸಂತೋಷದ ಸಂಗತಿಯಾಗಿದೆ.

ಸತ್ಯನಾರಾಯಣಾಚಾರ್ಯರಿಗೂ ಹಾಗೂ ರಾಘವೇಂದ್ರ ದರ್ಶನ ಕೇಂದ್ರದ ಎಲ್ಲ ಸದಸ್ಯರಿಗೂ ಆಯುರಾರೋಗ್ಯಭಾಗ್ಯಗಳನ್ನು ಕರುಣಿಸಲೆಂದು ಶ್ರೀರಾಮವಿಠ್ಠಲ ದೇವರಲ್ಲಿ ಪ್ರಾರ್ಥಿಸುತ್ತೇವೆ.

ಈ ಪುಸ್ತಕದ ಉಪಯೋಗವನ್ನು ಧರ್ಮಾಭಿಮಾನಿಗಳೆಲ್ಲರೂ ಪಡೆದು ಜೀವನದಲ್ಲಿ ಸುಖಸಮೃದ್ಧಿಯನ್ನು ಹೊಂದಿ ಭಗವದನುಗ್ರಹಕ್ಕೆ ಪಾತ್ರರಾಗಲಿ ಎಂದು ಆಶಿಸುತ್ತೇವೆ.

ಇತಿ ನಾರಾಯಣಸ್ಮರಣೆಗಳೊಂದಿಗೆ
**ಶ್ರೀವಿಶ್ವೇಶತೀರ್ಥಶ್ರೀಪಾದರು**
**ಶ್ರೀಪೇಜಾವರ ಅಧೋಕ್ಷಜಮಠ**
**ಉಡುಪಿ**

# ಪ್ರಕಾಶಕರ ನುಡಿ

ಶ್ರೀರಾಘವೇಂದ್ರಸ್ವಾಮಿಗಳವರ ಕೃಪೆಯ ಮೂಲಕ ಶ್ರೀಹರಿ-ವಾಯುಗಳ ಅನುಗ್ರಹ ಸಂಪಾದನೆಯೇ ನಮ್ಮ ಗುರಿ, ಕೆಂಗೇರಿ ಉಪನಗರದ ಶ್ರೀರಾಘವೇಂದ್ರಸ್ವಾಮಿಗಳವರ ಮಠದವರೇ ನಮ್ಮ ಆಶ್ರಯದಾತರು.

1994ರಲ್ಲಿ ಗ್ರಂಥಪ್ರಕಾಶನವನ್ನು ಪ್ರಾರಂಭಿಸಿದ ನಾವು, ಇದುವರೆಗೆ 17ಗ್ರಂಥಗಳನ್ನು ಪ್ರಕಟಿಸಿದ್ದೇವೆ. ಈಗ 18ನೆಯ ಗ್ರಂಥವಾಗಿ **"ಹೋಮ-ಹವನ"** ಗ್ರಂಥವನ್ನು ಪ್ರಕಟಿಸುವ ಭಾಗ್ಯ ಬಂದಿದೆ!

**"ಶ್ರೀರಾಘವೇಂದ್ರ ದರ್ಶನಕೇಂದ್ರ"** ಪ್ರಾರಂಭವಾದದ್ದೇ ಜ್ಞಾನಪ್ರಸಾರ - ಗ್ರಂಥಪ್ರಕಟನೆಯ ಉದ್ದೇಶದಿಂದ. ಅದರಲ್ಲೂ, ಈ ಗ್ರಂಥ ಪ್ರಕಾಶನ ಕಾರ್ಯದ ದೃಷ್ಟಿ, ಸಾಮಾನ್ಯರನ್ನು ಕುರಿತದ್ದಾಗಿರಬೇಕೆಂಬುದಾಗಿತ್ತು. ಅಂದರೆ, ಸಂಸ್ಕೃತಬಾರದ, ಶಾಸ್ತ್ರಪಾಠದ ಹಿನ್ನೆಲೆ ಇಲ್ಲದಿದ್ದರೂ, ಭಗವಂತನ ಅನುಗ್ರಹಸಂಪಾದನೆ ಮಾಡಬೇಕೆಂಬ ಆಸಕ್ತಿ ಇರುವ ಭಗವದ್‌ಭಕ್ತರ ಸಾಧನೆಗೆ ನೆರವಾಗಬೇಕೆಂಬುದಾಗಿತ್ತು.

ಈ ದೃಷ್ಟಿಯನ್ನಿಟ್ಟುಕೊಂಡೇ ನಾವು ಪ್ರಕಟಣೆಯನ್ನು ಪ್ರಾರಂಭ ಮಾಡಿದೆವು. ಇದುವರೆವಿಗೆ ನಾವು ಪ್ರಕಟಿಸಿರುವ ಗ್ರಂಥಗಳಲ್ಲಿ -

ಡಾ॥ ಎನ್.ವೆಂಕಟೇಶಾಚಾರ್ಯರ "ಶ್ರೀವೆಂಕಟೇಶ ವೈಭವಮ್" ಮತ್ತು "ಸದಾಚಾರ ವೈಭವಮ್"

ವಿ॥ ಶ್ರೀನಿವಾಸ ಸು.ಮಠದ(ಬಿಜಾಪುರ) ಮತ್ತು ವಿವಿಧ ವಿದ್ವಾಂಸರು ಸಿದ್ಧಪಡಿಸಿದ "ಶ್ರಾದ್ಧಕರ್ಮ"

ಡಾ॥ ಎ.ವಿ.ನಾಗಸಂಪಿಗೆ ಆಚಾರ್ಯರ "ಮತತ್ರಯ-ಸಮೀಕ್ಷಾ" (ಶಂಕರ-ರಾಮಾನುಜ-ಮಧ್ವದರ್ಶನಗಳ ಕಿರುಪರಿಚಯ)

ವಿ॥ ಸಿ. ಹೆಚ್. ಬದರೀನಾಥಾಚಾರ್ಯರ "ದಶಾವತಾರ ಸ್ತುತಿ" ಮತ್ತು "ಅಣುಮಧ್ವವಿಜಯ" (ಅರ್ಥಸಹಿತ)

ಡಾ॥ ವ್ಯಾಸನಕೆರೆಪ್ರಭಂಜನಾಚಾರ್ಯರ "ಮಧ್ವಸಿದ್ಧಾಂತ ಮತ್ತು ಶ್ರೀರಾಘವೇಂದ್ರ ಸ್ವಾಮಿಗಳವರ ಸಂದೇಶ (ಬೃಂದಾವನ ಪ್ರವೇಶ ಮುನ್ನ)" ಮುಂತಾದವು ಅತ್ಯಂತ ಜನಪ್ರಿಯವಾಯಿತು.

ಈ ದಿಶೆಯಲ್ಲಿ ನಮಗೆ ಬಂದ ಇನ್ನೊಂದು ಆಲೋಚನೆ ಎಂದರೆ – ಸಾಮಾನ್ಯವಾಗಿ ನಾವುಗಳು ಭಗವಂತನ ಅನುಗ್ರಹಸಂಪಾದನೆಗಾಗಿ, ನಮಗೆ ಗೊತ್ತಿರುವ ಪುರೋಹಿತರ ಮಾರ್ಗದರ್ಶನದಲ್ಲಿ ಹೋಮಗಳನ್ನು ನಡೆಸುತ್ತಾ ಬಂದಿದ್ದೇವೆ. ಆದರೆ ಸಾಮಾನ್ಯರಿಗೆ, ಅವರು ನಡೆಸಿಕೊಟ್ಟ ಹೋಮ–ಹವನಗಳ ಅರ್ಥ, ಪ್ರಾಮುಖ್ಯತೆ, ಉದ್ದೇಶ ಇತ್ಯಾದಿಗಳು ತಿಳಿಯುವುದಿಲ್ಲ. ಪುರೋಹಿತರಲ್ಲಿ ನಮಗಿರುವ ನಂಬಿಕೆಯೊಂದೇ ಆಧಾರ!

ಆದ್ದರಿಂದ, ಸಾಮಾನ್ಯರಿಗೆ ಅರ್ಥವಾಗುವಂತಹ ಗ್ರಂಥವೊಂದನ್ನು ಪ್ರಕಟಿಸಲು ಪ್ರಯತ್ನ ಮಾಡುತ್ತಿದ್ದೆವು. "ಪೌರೋಹಿತ್ಯ–ಬರವಣಿಗೆ" ಈ ಎರಡೂ ಕ್ಷೇತ್ರಗಳಲ್ಲಿ ಪಾಂಡಿತ್ಯವುಳ್ಳ, ಬೆಂಗಳೂರಿನ ಪೂರ್ಣಪ್ರಜ್ಞ ವಿದ್ಯಾಪೀಠದಲ್ಲಿ ಪ್ರಾಧ್ಯಾಪಕರಾಗಿರುವ ಡಾ॥ ಹೆಚ್. ಸತ್ಯನಾರಾಯಣಾಚಾರ್ಯರನ್ನು ಪ್ರಾರ್ಥಿಸಿದೆವು. ಆದರೆ ಅವರಿಗೆ ಗ್ರಂಥ ಬರೆಯಲು, ಅವರ ಅವಿರತ ಕಾರ್ಯಕ್ರಮಗಳ ಮಧ್ಯೆ, ಸಮಯದ ಅಭಾವ! ಆದರೂ ನಮ್ಮ ಮೇಲಿನ ಅಭಿಮಾನದಿಂದ ನಮ್ಮ ಕೇಂದ್ರವು ಉತ್ತೇಜನ ನೀಡುತ್ತಿರುವ "ಶ್ರೀಮುಖ್ಯಪ್ರಾಣ" ಮಾಸ ಪತ್ರಿಕೆಯಲ್ಲಿ ಬಿಡಿಲೇಖನಗಳ ರೂಪದಲ್ಲಿ ವಿಷಯದ ಬಗ್ಗೆ ಬರೆದು ಕೊಡಲು ಒಪ್ಪಿದರು. (ಲೇಖನ ಮಾಲೆ, ಸುಮಾರು 5ವರ್ಷಗಳಕಾಲ ಮುಂದುವರಿಯಿತು!) ಈಗ, ಆ ಲೇಖನಗಳ ಒಟ್ಟು ಸಾರವೇ ಗ್ರಂಥರೂಪದಲ್ಲಿ ನಿಮ್ಮ ಮುಂದಿದೆ!

ಈ ಗ್ರಂಥ ಸಿದ್ಧವಾಗಲು ನಮಗೆ ಸಹಕಾರ ನೀಡಿದ ಇವರುಗಳಿಗೆ ನಮ್ಮ ಕೃತಜ್ಞತೆಗಳನ್ನು ಅರ್ಪಿಸುತ್ತೇವೆ –

1) ನಮ್ಮ ಪ್ರಾರ್ಥನೆಯನ್ನು ಮನ್ನಿಸಿ, ನಾವು ಕೊಟ್ಟ ಕಷ್ಟಕೋಟಲೆ ಗಳನ್ನು ನಗುನಗುತ್ತಾ ಸಹಿಸಿ, ಈ ಗ್ರಂಥರಚನೆಮಾಡಿಕೊಟ್ಟ, ಸಹೃದಯ ವಿದ್ವಾಂಸರಾದ ಡಾ॥ ಹೆಚ್.ಸತ್ಯನಾರಾಯಣಾಚಾರ್ಯರಿಗೆ,

2) ನಮ್ಮ ಪ್ರಾರ್ಥನೆಯನ್ನು ಮನ್ನಿಸಿ, ಡಾ॥ ಹೆಚ್. ಸತ್ಯನಾರಾಯ –ಣಾಚಾರ್ಯರ ಪರಿಚಯ ಮಾಡಿಕೊಟ್ಟ (ರಕ್ಷಾಪುಟ–4) ಪೂರ್ಣಪ್ರಜ್ಞ ವಿದ್ಯಾಪೀಠದಲ್ಲಿ ಅಧ್ಯಾಪಕರಾಗಿರುವ ವಿ॥ ತಿರುಮಲಕುಲಕರ್ಣಿ ಅವರಿಗೆ,

3) ನಮ್ಮ ಎಲ್ಲ ಗ್ರಂಥಪ್ರಕಾಶನ ಕಾರ್ಯಗಳಲ್ಲಿ, ಎಲ್ಲ ಹಂತಗಳಲ್ಲಿ ಮಾರ್ಗದರ್ಶನ ಮಾಡಿ, ನಮ್ಮನ್ನು ಮುನ್ನಡೆಸುತ್ತಿರುವ, ಪೂರ್ಣಪ್ರಜ್ಞ ವಿದ್ಯಾಪೀಠದ ಅಧ್ಯಾಪಕರಾದ ವಿ॥ ಸಿ. ಹೆಚ್. ಬದರೀನಾಥಾಚಾರ್ಯರಿಗೆ,

4) ಡಾ॥ ಹೆಚ್. ಸತ್ಯನಾರಾಯಣಾಚಾರ್ಯರ ಬಿಡಿಲೇಖನಗಳ ಮಾಲೆಯನ್ನು ಪ್ರಕಟಿಸಿದ "ಶ್ರೀಮುಖ್ಯಪ್ರಾಣ" ಮಾಸಪತ್ರಿಕೆಯ ಸಂಪಾದಕ ಮಂಡಲಿಯವರಿಗೆ,

5) ರಕ್ಷಾಪುಟ ವಿನ್ಯಾಸವನ್ನು ರಚಿಸಿಕೊಟ್ಟ ಶ್ರೀಯುತ ಕೆ. ಎಮ್. ಶೇಷಗಿರಿ ಅವರಿಗೆ,

6) ಕೆಂಗೇರಿ ಉಪನಗರದ, ಶ್ರೀರಾಘವೇಂದ್ರಸ್ವಾಮಿಗಳ ಮಠದ ಆಡಳಿತ ಮಂಡಲಿಯವರಿಗೆ,

7) ಗ್ರಂಥಪ್ರಕಟನೆಗೆ, ನಮ್ಮ ಮನವಿಗೆ ಸ್ಪಂದಿಸಿ, ಸಾಕಷ್ಟು ಮುಂಚಿತ ವಾಗಿಯೇ, ಉದಾರವಾಗಿ ಧನಸಹಾಯಮಾಡಿ, ಸಹನೆಯಿಂದ ಕಾದು, ನಂತರ ನಾವು "ಗ್ರಂಥಬಿಡುಗಡೆ ಸಮಾರಂಭ"ದಂದು ನೀಡಿದ ಗ್ರಂಥದ ಪ್ರತಿಗಳನ್ನು ಸ್ವೀಕರಿಸುವ ಕೃಪೆಮಾಡಿದ ಭಗವದ್‌ಭಕ್ತರಿಗೆ,

8) ಮುದ್ರಣ ಕಾರ್ಯನಿರ್ವಹಿಸಿದ "ಪರಿಶ್ರೀ ಪ್ರಿಂಟರ್ಸ್"ನ ಶ್ರೀ ಆರ್. ಶ್ರೀನಾಥ್ ಮತ್ತು ಸಂಗಡಿಗರಿಗೆ,

9) ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಸಹಾಯ-ಸಹಕಾರಗಳನ್ನು ನೀಡಿದ ಎಲ್ಲರಿಗೂ.

ಭಾರತೀರಮಣಮುಖ್ಯಪ್ರಾಣಾಂತರ್ಗತನಾದ ಶ್ರೀಹರಿಯು ನಮ್ಮೆಲ್ಲರ ಈ ಸೇವೆಯನ್ನು ಸ್ವೀಕರಿಸುವ ಕೃಪೆ ಮಾಡಲೆಂದು ನಾವು ಪ್ರಾರ್ಥಿಸುತ್ತೇವೆ.

ಇತಿ

**ದಿನಾಂಕ : 14. 11. 2012**
**ನಂದನ ಸಂ. ಕಾರ್ತಿಕ ಶು.ಪಾಡ್ಯ**
**(ಬಲಿಪಾಡ್ಯಮಿ)**

**ಜಿ. ವೆಂಕಟೇಶ್**
**ಪ್ರವರ್ತಕರು**
**ಶ್ರೀರಾಘವೇಂದ್ರ ದರ್ಶನಕೇಂದ್ರ**

**ಈ ಗ್ರಂಥ ಪ್ರಕಾಶನಕ್ಕೆ**
**ಸಹಾಯಧನ ನೀಡಿರುವ ದಾನಿಗಳ**
**ಹೆಸರುಗಳನ್ನು ಕೊನೆಯಲ್ಲಿ ಕೊಡಲಾಗಿದೆ**

# ಲೇಖಕ ಭಣಿತಿ

ಸನ್ನ್ಯಾಸಿಯು ಗೃಹಸ್ಥನಂತೆ ಬದುಕಕೂಡದು. ಗೃಹಸ್ಥನಾದವ ಸಂನ್ಯಾಸಿಯಂತೆ ಬದುಕಕೂಡದು. ನಿರಗ್ನಿ-ನಿಷ್ಕ್ರಿಯನಾದವ ಸನ್ನ್ಯಾಸಿ. ಸಾಗ್ನಿ-ಸಕ್ರಿಯನಾದವ ಸಾಧಕ ಗೃಹಸ್ಥ. ಗಾರ್ಹಸ್ಥ್ಯದ ಭಾರ, ಧರ್ಮ, ಕರ್ಮಗಳು ಗೃಹಸ್ಥನಿಗೆ ಅನಿವಾರ್ಯ.

ಪತ್ನೀ-ಸುತರೊಂದಿಗೆ ಕಾಲಕಾಲಕ್ಕೆ ಯಜ್ಞ-ಯಾಗಾದಿಗಳನ್ನು, ಸಂಭ್ರಮದ ಹಬ್ಬಗಳನ್ನೂ ಗೃಹಸ್ಥ ನಡೆಸಿಕೊಂಡು ಹೋಗಬೇಕು. ಸ್ವಾಹಾಕಾರ ಸ್ವಧಾಕಾರಗಳ ಸದ್ದಿಲ್ಲದ ಮನೆ ಮನೆಯೇ ಅಲ್ಲ.

'ಸ್ವಾಹಾಸ್ವಧಾಕಾರವಿವರ್ಜಿತಾನಿ ಸ್ಮಶಾನತುಲ್ಯಾನಿ ಗೃಹಾಣಿ ತಾನಿ'

ಪ್ರತಿಯೊಬ್ಬ ವಿಪ್ರನೂ ಯಜ್ಞ-ಕರ್ಮಗಳ ಬಗೆಗೆ ತಿಳಿದಿರುತ್ತಿದ್ದ ಕಾಲವಿತ್ತು. ಇಂದು ಆ ಕಾಲ ಗತಿಸಿದೆ. ತಿಳಿದಿದ್ದೇನೆ ಎಂದು ತಿಳಿದವನೂ ಅಬದ್ಧವಾಗಿಯೋ ಆಂಶಿಕವಾಗಿಯೋ ತಿಳಿದಿರುವುದೇ ಹೆಚ್ಚು. ತಿಳಿದ ಪುರೋಹಿತರಿಗೂ ತಿಳಿ ಹೇಳುವಷ್ಟು ಪುರುಸೊತ್ತು ಸಿಗುತ್ತಿಲ್ಲ.

ಕರ್ಮದ ಬಗ್ಗೆ ಕರ್ಮದೇವತೆಯ ಬಗ್ಗೆ ತಿಳಿದು ಶ್ರದ್ಧೆಯಿಂದ ಮಾಡಿದಾಗಲೇ ವಿಶಿಷ್ಟಫಲ. ಅದಕ್ಕಾಗಿ ಈ ಪುಸ್ತಕ.

ಹೋಮ-ಹವನಗಳೂ ನೂರಾರಿವೆ. ಅವೆಲ್ಲವುಗಳ ಬಗೆಗೆ ನಾನು ಬರೆದಿಲ್ಲ. ನಾಗಪ್ರತಿಷ್ಠೆ, ವಿರಜಾಹೋಮ, ಧನಿಷ್ಠಾಪಂಚಕಹೋಮ ಮುಂತಾದವುಗಳ ಬಗ್ಗೆ ಬರೆಯಹೋಗಲಿಲ್ಲ. ಹೆಚ್ಚು ಚಾಲ್ತಿಯಲ್ಲಿರುವ ಯಜ್ಞಗಳ ಬಗ್ಗೆ ಮಾತ್ರ ಸಂಕ್ಷಿಪ್ತಪರಿಚಯವನ್ನಿತ್ತಿದ್ದೇನೆ.

ಯಾಗಪ್ರಕ್ರಿಯೆಯಲ್ಲಿರುವ ಗಹನವಾದ ಆಂತರ್ಯಗಳನ್ನು ಇಲ್ಲಿ ವಿವೇಚಿಸ ಹೋಗಲಿಲ್ಲ. ಯಾಗಗಳ ಬಗೆಗಿನ ಸ್ಥೂಲಪರಿಚಯವನ್ನಷ್ಟೇ ಕೊಡುವುದು ಈ ಹೊತ್ತಿಗೆಯ ಉದ್ದೇಶ.

ಈ ಸಂದರ್ಭದಲ್ಲಿ ಅಧ್ಯಾತ್ಮದ ವಿದ್ಯೆಯಿತ್ತು ಉದ್ಧರಿಸಿದುದಲ್ಲದೇ ವಿದ್ಯಾದಾನಕ್ಕೆ ಅವಕಾಶವಿತ್ತು ಪೊರೆಯುತ್ತಿರುವ ಕರುಣೆಯ ಕಡಲು ಪರಮ ಪೂಜ್ಯ ಶ್ರೀವಿಶ್ವೇಶತೀರ್ಥಶ್ರೀಪಾದರನ್ನು ಭಕ್ತಿಯಿಂದ ವಂದಿಸುತ್ತೇನೆ. ಪೂಜ್ಯರು ಆಶೀರ್ವಚನದ ಮೂಲಕ ಪುಸ್ತಕವನ್ನು ಹರಸಿದ್ದಾರೆ. ಪೂಜ್ಯರಿಗೆ ಪೌನಃಪುನ್ಯೇನ ಪ್ರಣಾಮಗಳು.

ಪೌರೋಹಿತ್ಯವಿಭಾಗದ ಅಧ್ಯಯನದಲ್ಲಿ ತಮ್ಮ ವಿದ್ಯೆಯನ್ನು ನನಗೆ ಧಾರೆಯೆರೆದ ಪ್ರೀತಿಯಗುರುಗಳಾದ ಇಂದು ಕಣ್ಣಮುಂದಿಲ್ಲದ ಶ್ರೀಪಡುಬಿದ್ರಿ ಪದ್ಮನಾಭಾಚಾರ್ಯರನ್ನೂ ಭಕ್ತಿಯಿಂದ ಸ್ಮರಿಸಿಕೊಳ್ಳುತ್ತೇನೆ.

ಈ ಪುಸ್ತಕದ ಪರಿಕಲ್ಪನೆ ಒತ್ತಾಸೆಗಳೆಲ್ಲವು ಶ್ರೀಯುತ ಡಿ. ವಿ. ಕೃಷ್ಣಮೂರ್ತಿಗಳದು. ರಾಘವೇಂದ್ರದರ್ಶನಕೇಂದ್ರದ ಸಕ್ರಿಯಕಾರ್ಯಕರ್ತರಾಗಿದ್ದು ಸಮಾಜಮುಖೀ ವ್ಯಕ್ತಿತ್ವವುಳ್ಳ ಶ್ರೀಯುತರು ಈ ಬಗೆಯ ಮಾರ್ಗದರ್ಶಿಯೊಂದರ ಆವಶ್ಯಕತೆಯನ್ನು ಮನಗಂಡು 'ಇದರ ಬಗ್ಗೆ ಬರೆಯಿರಿ, ಇದರ ಬಗ್ಗೆಯೂ' ಎಂದು ಬರೆಸಿಕೊಳ್ಳುತ್ತಾ ಇಂದು ಪ್ರಕಟಗೊಳ್ಳುವುದಕ್ಕೆ ಕಾರಣಕರ್ತಾರರಾಗಿದ್ದಾರೆ. ಅವರ ಹೃದಯವಂತಿಕೆಗೆ ನನ್ನ ನಮನಗಳು. ಶ್ರೀರಾಘವೇಂದ್ರ ದರ್ಶನಕೇಂದ್ರದ ಸಕ್ರಿಯ ಸಜ್ಜನಿಕೆಯ ಹಿರಿಯರ ತಂಡಕ್ಕೆ ಅಭಿನಂದನೆಗಳು.

ಪುಸ್ತಿಕೆಯಲ್ಲಿ ಲೇಖಕಪ್ರಮಾದ ಅಥವಾ ಲೇಖನಪ್ರಮಾದಗಳು ಘಟಿಸಿದ್ದರೆ ಕ್ಷಮಿಸಿ, ತಿಳಿಸಿ ಸರಿಗೊಳಿಸುವುದಕ್ಕೆ ಅನುವಾಗಬೇಕೆಂದು ಹಿರಿಯರಲ್ಲಿ ಕಳಕಳಿಯ ವಿನಂತಿಯೊಂದಿಗೆ ವಿರಮಿಸುತ್ತೇನೆ.

ಸಹೃದಯ ಬಂಧು

**ಹೆಚ್. ಸತ್ಯನಾರಾಯಣಾಚಾರ್ಯ**

## ವಿಷಯಾನುಕ್ರಮಣಿಕೆ

## ವಿಷಯಾನುಕ್ರಮಣಿಕೆ

# ಹೋಮ - ಹವನ

## ಯಜ್ಞ

ಪ್ರಜಾಪತಿ ಪ್ರಜೆಗಳನ್ನು ಸೃಜಿಸಿದ. ಜೊತೆಗೆ ಯಜ್ಞ-ಯಾಗಗಳ ವಿಧಿವಿಧಾನಗಳನ್ನು ನಿರ್ಮಿಸಿದ. ಪ್ರಜೆಗಳನ್ನು ಕುರಿತು ಯಜ್ಞ ಪ್ರಕ್ರಿಯೆಗಳನ್ನು ಉಪದೇಶಿಸಿ ಹೇಳಿದ. 'ಮಕ್ಕಳೇ, ಈ ಯಜ್ಞ ನಿಮಗೆ ಕಾಮಧೇನು. ಇದರ ಮೂಲಕ ಬಯಸಿದುದನ್ನು ಪಡೆಯಿರಿ. ಮಾನವ ಪ್ರಯತ್ನದಿಂದ ಅಲಭ್ಯವಾದುದು ಇದರ ಮೂಲಕ ಸಾಧ್ಯ,

**ಸಹಯಜ್ಞಾಃ ಪ್ರಜಾಃ ಸೃಷ್ಟ್ವಾ ಪುರೋವಾಚ ಪ್ರಜಾಪತಿಃ ।**
**ಅನೇನ ಪ್ರಸವಿಷ್ಯಧ್ವಂ ಏಷ ವೋऽಸ್ತ್ವಿಷ್ಟಕಾಮಧುಕ್ ॥**

(ಗೀತಾ 3.10)

ನಾರಾಯಣೋಪನಿಷತ್ತು ಉಸುರಿದೆ, 'ದಾನ, ಧರ್ಮ, ಯಜ್ಞಗಳು ದೇವತೆಗಳನ್ನು ಪ್ರೀತಿಗೊಳಿಸಿವೆ. ಇವುಗಳಿಂದ ದ್ವೇಷಿಗಳೂ ಮಿತ್ರರಾಗುತ್ತಾರೆ. ಇವನ್ನು ಆಧರಿಸಿ ಎಲ್ಲವೂ ನಿಂತಿದೆ'.

**ಯಜ್ಞವು ಧರ್ಮ :**

'ಧರ್ಮ' ಎಂಬ ಶೀರ್ಷಿಕೆಯ ಅಡಿಯಲ್ಲಿ ಬರುವ ಹಲವು ಅಂಶಗಳಲ್ಲಿ ಯಜ್ಞವೂ ಒಂದು. ಯಾಜ್ಞಿಕನು ಧಾರ್ಮಿಕನೆನಿಸುತ್ತಾನೆ.

ಯಜ್ಞವೊಂದೇ ಧರ್ಮವಲ್ಲ, ಯಜ್ಞವೂ ಒಂದು ಧರ್ಮ.

'ಸತ್ಯಂ ವದ ಧರ್ಮಂ ಚರ' ಎಂಬುದು ಉಪನಿಷತ್ತಿನ ಆದೇಶ. 'ಸತ್ಯವನ್ನು ಹೇಳು' ಎಂದ ಆರ್ಷವಾಣಿ ಧರ್ಮವನ್ನೂ ಹೇಳು ಎನ್ನಲಿಲ್ಲ. ಧರ್ಮವನ್ನು ಆಚರಿಸು ಎಂದಿತು. ಹಲವು ಪರಿಕರಗಳ ಸಹಕಾರದಿಂದ ಹಲವರು ಸೇರಿ ನಡೆಸುವಂಥದು ಆಚರಣೆ. ಆಚರಿಸಬೇಕಾದ ಧರ್ಮಗಳಲ್ಲಿ ಒಂದು ಯಜ್ಞ. 'ಆಚಾರಪ್ರಭವೋ ಧರ್ಮಃ' ಆಚರಣೆಯೇ ಧರ್ಮಕ್ಕೆ ಜನ್ಮವಿತ್ತಿತು.

ಧರ್ಮದ ಒಂದು ಘಟಕ ಯಜ್ಞ, ಅದಕ್ಕಾಗಿ ಧರ್ಮದ ಅರ್ಥವ್ಯಾಪ್ತಿಯನ್ನು ತಿಳಿಯಬೇಕು. ಧರ್ಮದ ಅರ್ಥಪರಿಧಿಯನ್ನು ಮೀರಿ ನಿಂತಾಗ ಯಜ್ಞವೂ ಅಧರ್ಮವೆನಿಸೀತು.

## ಧರ್ಮವೆಂದರೇನು?

ಹತ್ತು ಜನ ಇಪ್ಪತ್ತುತರ ವ್ಯಾಖ್ಯಾನಿಸುತ್ತಾರೆ. ಹೈಸ್ಕೂಲು ಓದುವ ಪೋರ ಹೇಳುತ್ತಾನೆ – ಧರ್ಮವೆಂದರೆ ಹಿಂದೂ, ಜೈನ, ಬೌದ್ಧ, ಕ್ರಿಸ್ತ, ಮುಸ್ಲೀಮ್.

ಇದು ಧರ್ಮದ ವ್ಯಾಖ್ಯೆಯಲ್ಲ, ನಾವು ಮಾಡಿಕೊಂಡ ಧರ್ಮದ ಒಡಕುಗಳು ಅಥವಾ ತತ್ತ್ವದ ಅರಿವಿನಲ್ಲಾದ ಭಿನ್ನಾಭಿಪ್ರಾಯಗಳ ನಿಶ್ಚಿತ ಪರಿಧಿಗಳೇ ಇವು. ಜನಾಂಗದಲ್ಲಿ ತನ್ನನ್ನು ತಾನು ಗುರುತಿಸಿಕೊಳ್ಳಲು ಮನುಷ್ಯ ಮಾಡಿಕೊಂಡ ನಿಯಮಗಳೇ ಧರ್ಮವೆನಿಸಲಾರವು. ಎಲ್ಲಾ ಕಟ್ಟು, ಪರಿಧಿಗಳನ್ನು ಮೀರಿ ನಿಂತುದು ಧರ್ಮ.

ಪಶ್ಚಿಮದಿಂದ ಬಂದು ನಮ್ಮನ್ನು ಆಳಿಹೋದವರಂತೂ ಧರ್ಮವನ್ನು ಯದ್ವಾತದ್ವಾ ವ್ಯಾಖ್ಯಾನಿಸಿದರು. ನಮ್ಮವರೂ ಅವರು ಬೆಳೆಸಿದ ವಿಷವೃಕ್ಷಕ್ಕೆ ನೀರೆರೆಯುತ್ತಾ ಧರ್ಮದ ಅರೆಬರೆ ಅಂಕುಡೊಂಕು ಚಿತ್ರವನ್ನು ನೀಡತೊಡಗಿದರು.

**'ಧರ್ಮವೆಂದರೆ ಮನುಷ್ಯನ ಕುತ್ತಿಗೆಗೆ ಹಾಕಿದ ಉರುಳು, ಬೆನ್ನೇರಿದ ಭೂತ!'** ಎಂದಿದ್ದಾನೆ ಆಲೆಂಬರ್ಟ್.

**'ಮಾನವದೇಹಧಾರೀ ಮಂಗಗಳ ಸ್ವೇಚ್ಛಾಲೀಲೆಯೇ ಧರ್ಮಾಚರಣೆ'** ಎಂದವ ಹ್ಯೂಮ್.

**'ಧರ್ಮವೆಂಬುದು ಬುದ್ಧಿವಂತಿಕೆಯ ಶವ. ಮಾನವತೆಯ ಹೆಣ. ಅದು ಎರಡೂ ಕಣ್ಣಿಗೆ ಕಟ್ಟಿದ ಪಟ್ಟಿ.'** ಎಂದವರಂತೂ ನಮ್ಮವರೇ. ಇಂಥವರು ಧರ್ಮಾಭಿಮಾನವನ್ನು **'ಪರಧರ್ಮನಿಂದೆ'**ಯೊಡನೆ ಸಮೀಕರಿಸಿದ್ದಾರೆ.

ಈ ರೀತಿಯು ಕಟುಶಬ್ದಗಳಿಂದ ಅಧಾರ್ಮಿಕ ತನ್ನ ತೀಟೆ ತೀರಿಸಿಕೊಂಡಿದ್ದಾನೆ. ಇವನಿಗೆ ದೇವಾಲಯ ಚರ್ಚ್‌ನಂತೆ ಕಂಡಿತು. ಪುರೋಹಿತರು ಪಾದ್ರಿಯಂತೆ ಕಂಡರು. ನಮ್ಮ ಅನೇಕ ದೇವರು, ವಿಭಿನ್ನ ಆಚರಣೆಗಳು ಇವನನ್ನು ಗಲಿಬಿಲಿಗೊಳಿಸಿದವು. ಅವನ್ನು ಅರ್ಥೈಸಿಕೊಳ್ಳುವ ಸಾಮರ್ಥ್ಯವಾಗಲೀ ಮನಃಸ್ಥಿತಿಯಾಗಲೀ ಇವನಿಗೆ ಇರಲಿಲ್ಲ. ಬಾಯಿಗೆ ಬಂದಂತೆ ಹೇಳುತ್ತಾ ಬರೆಯುತ್ತಾ ಹೊಸಪೀಳಿಗೆ ಯನ್ನು ತನ್ನೆಡೆಗೆ ಸೆಳೆಯತೊಡಗಿದ್ದಾನೆ.

ಇಂದಿನ ಯುವಜನಾಂಗ ನಾವು ಧರ್ಮರಹಿತರು, ಅಧಾರ್ಮಿಕರು, ವಿಧರ್ಮಿಗಳು ಎಂದು ಹೇಳಿಕೊಳ್ಳುವುದರಲ್ಲಿ ಹೆಮ್ಮೆ ಪಡುತ್ತಾರೆ. ಸನಾತನ ಧರ್ಮವನ್ನು ಹೀಗೆಳೆಯುವವರೆ ಇಂದಿನ ವಿದ್ಯಾವಂತರು, ಪುರೋಗಾಮಿಗಳು, ಪ್ರಗತಿಶೀಲರು ಎಂಬ ಭ್ರಮೆ ಎಲ್ಲೆಡೆ ತನ್ನ ಕಬಂಧಬಾಹು ಚಾಚಿದೆ.

ವಸ್ತುತಃ ಧರ್ಮವು ಲೋಕವಿಧ್ವಂಸಕವಲ್ಲ. ಜೀವಸಂಜೀವಿನಿ. ಅದರಿಂದ ದೃಷ್ಟಿ ಸಂಕುಚಿತವಾಗುವುದಿಲ್ಲ. ವಿಶಾಲವಾಗುತ್ತದೆ. ಅದು ಕುತ್ತಿಗೆಗೆ ಹಾಕಿದ ಉರುಳಲ್ಲ. ಸ್ವೇಚ್ಛಾಚಾರಕ್ಕೆ ನಿರ್ಬಂಧ. ಕಣ್ಣಿಗೆ ಕಟ್ಟಿದ ಪಟ್ಟಿಯಲ್ಲ. ಕಾಣಿಸದುದನ್ನು ಕಾಣಿಸುವ ನೇತ್ರಾಂಜನ. ಧರ್ಮ ಹಾಗೂ ಮಾನವೀಯತೆ

ಪರಸ್ಪರ ಪೂರಕ, ಪರಸ್ಪರ ಪೋಷಕ ಮಾತ್ರವಲ್ಲ ಒಂದನ್ನು ಬಿಟ್ಟು ಒಂದಿಲ್ಲ. ಧರ್ಮವಿಲ್ಲದೆ ಮನುಷ್ಯ ಮನುಷ್ಯನಾಗಲಾರ.

ಧರ್ಮಗ್ಲಾನಿಯಾದಾಗ, ಅಧರ್ಮದ ಅಭ್ಯುತ್ಥಾನವಾದಾಗ ನಾನು ಅವತರಿಸಿ ಬರುತ್ತೇನೆ **'ತದಾತ್ಮಾನಂ ಸೃಜಾಮ್ಯಹಮ್'** ಎಂಬ ಕೃಷ್ಣ ವಾಣಿಯಲ್ಲಿ ಧರ್ಮವೆಂಬುದು ವಿಶಾಲ ಅರ್ಥದಲ್ಲಿ ಬಂದುದು. ಸಾಧು ಪರಿತ್ರಾಣದಿಂದ, ಸ್ವಾರ್ಥಿದುರ್ಜನರ ವಿನಾಶದಿಂದ ಧರ್ಮ ಸಂಸ್ಥಾಪನೆಯೆಂಬುದು ದೈವೀ ನಿಲುವು.

ಧರ್ಮವೆಂಬುದು ಕರ್ತವ್ಯಪಾಲನೆಯ ನಿಯಮ ಅಥವಾ ವಿವಿಧ ಕ್ಷೇತ್ರಗಳಲ್ಲಿ ಉತ್ತಮ ಯಶಸ್ಸನ್ನು ಸಂಪಾದಿಸಲು ಕರ್ತೃವು ಸ್ವೀಕರಿಸಿದ ಬಂಧನ. ಆದ್ದರಿಂದಲೇ ಆಯಾ ಕ್ಷೇತ್ರಗಳಿಗೆ ಸಂಬಂಧಿಸಿದ ಪದವೊಂದನ್ನು ಧರ್ಮದ ಹಿಂದೆ ಅಂಟಿಸಿದರೆ ಧರ್ಮದ ವ್ಯಾಖ್ಯಾನ ಸಾಕಾರವಾಗುತ್ತದೆ. ಅಧ್ಯಾಪಕಧರ್ಮ, ಶಿಷ್ಯಧರ್ಮ, ರಾಜಧರ್ಮ, ಯತಿಧರ್ಮ, ಗೃಹಸ್ಥಧರ್ಮ, ಸ್ತ್ರೀಧರ್ಮ, ಬ್ರಾಹ್ಮ, ಕ್ಷಾತ್ರ, ವೈಶ್ಯ, ಶೂದ್ರಧರ್ಮ. ಹೀಗೆ ಉಪಪದ ಸೇರಿಸಿದಾಗ ಧರ್ಮ ಸಂಕೀರ್ಣವಾಗು- ವುದಿಲ್ಲ. ಅಲ್ಲಿ ಭ್ರಾಂತಿ ಮೂಡುವುದಿಲ್ಲ.

ಜಗತ್ತಿನ ಎಲ್ಲರ ಶ್ರೇಯಸ್ಸನ್ನೂ ಅನುಲಕ್ಷಿಸಿ ಲೋಕಕಲ್ಯಾಣಕಾರಕ ಪ್ರಕ್ರಿಯೆ ಧರ್ಮ.

ಈ ವ್ಯಾಖ್ಯಾನದ ಅಡಿಯಲ್ಲಿ ಯಜ್ಞವೂ ಒಂದು ಧರ್ಮ. ಅದು ವಿಶೇಷವಾಗಿ ಗೃಹಸ್ಥಧರ್ಮ.

ಒಂದು ಯಜ್ಞದ ಹಿಂದೆ ಇಂದ್ರಿಯ ನಿಗ್ರಹವಿದೆ. ಸತ್ಯ, ಅಕ್ರೋಧ, ಶೌಚಗಳ ಪಾಠವಿದೆ. ಎಲ್ಲಕ್ಕಿಂತ ಹೆಚ್ಚು ತ್ಯಾಗದ ನೀತಿಯಿದೆ. ಧರ್ಮದರ್ಶಿ ಮನು ನುಡಿದ ಹತ್ತು ಧರ್ಮಲಕ್ಷಣಗಳೂ ಯಜ್ಞಕ್ಕೆ ಸಾಧನವೆನ್ನುವುದಕ್ಕಿಂತಲೂ ಹೆಚ್ಚಾಗಿ ಇವು ಯಜ್ಞಸಾಧ್ಯವೆನಿಸಿವೆ.

**'ಧೃತಿಃ ಕ್ಷಮಾ ದಮೋऽಸ್ತೇಯಂ ಶೌಚಮಿಂದ್ರಿಯನಿಗ್ರಹಃ ।**
**ಧೀರ್ವಿದ್ಯಾ ಸತ್ಯಮಕ್ರೋಧೋ ದಶಕಂ ಧರ್ಮಲಕ್ಷಣಮ್ ॥'**

ಎಂದೆಂದೂ ಸಂತೋಷಿಯಾಗಿ ಇರುವಿಕೆ, ಸಹನೆ, ಮನಸ್ಸಿನ ಸಮಸ್ಥಿತಿ, ಪರರ ಧನಕ್ಕೆ ಕೈಹಾಕದಿರುವ ಪ್ರವೃತ್ತಿ. ಮನಸ್ಸು-ಮಾತು- ದೇಹಗಳ ಶುಚಿತ್ವ, ಇಂದ್ರಿಯಗಳ ನಿಯಂತ್ರಣ, ಸೂಕ್ಷ್ಮಗ್ರಾಹೀ ವಿವೇಚನೆ, ಶಾಸ್ತ್ರಪರಿಜ್ಞಾನ, ಸತ್ಯವಚನ, ಕೋಪಗೊಳ್ಳದ ಸಂಯಮತೆ ಇವು ಹತ್ತು ಧರ್ಮದ ಲಕ್ಷಣ.

ಇವೇ ಮನುಷ್ಯಸೀಮಾತೀತವಾದ ವಿಶ್ವ ಕಲ್ಯಾಣಕಾರಕ ಧರ್ಮಗಳು.

## ಭಯಪ್ರಲೋಭನೆಗಳ ಮಿತಿ

ಯಜ್ಞವು ಲೋಕಧಾರಕ. ಲೋಕಧಾರಕವಾದುದು ಧರ್ಮ. **'ಧಾರಣಾತ್ ಧರ್ಮ ಇತ್ಯಾಹುಃ'**

ಸಂಚಾರನಿಯಮ ಪಾಲಿಸದಿದ್ದರೆ ಅಪಘಾತಗಳಾಗುತ್ತವೆ. ಅಂಗಡಿಯಿಂದ ಸಾಮಾನು ತಂದು ದುಡ್ಡು ಕೊಡದಿದ್ದರೆ, ಸಾಲ ಪಡೆದು ಹಿಂತಿರುಗಿಸದಿದ್ದರೆ ಸಾಲಕೊಟ್ಟವ ಮನೆಗೆ ಧಾಳಿಯಿಡುತ್ತಾನೆ. ಪೋಲೀಸರಿಗೊಪ್ಪಿಸುತ್ತಾನೆ. ಇಂತಹ ಭಯದಿಂದ ಅದೆಷ್ಟೋ ಮಂದಿ ನಿಯಮದಿಂದ ಬದುಕುತ್ತಾರೆ.

ಆದರೆ ಎಲ್ಲರ ಹಿಂದೆ ಒಬ್ಬ ಪೋಲೀಸ್ ಅಧಿಕಾರಿ ಇರುವುದು ಸಾಧ್ಯವಿಲ್ಲ. ಅದು ಸುಸಂಸ್ಕೃತ ಸಮಾಜದ ಲಕ್ಷಣವೂ ಅಲ್ಲ.

ಕೇವಲ ಭಯದಿಂದ ವ್ಯವಸ್ಥೆ ಸಾಧ್ಯವೂ ಇಲ್ಲ.

'ಒಳ್ಳೆಯ ಕೆಲಸ, ಯಜ್ಞ, ಪೂಜೆಗಳನ್ನು ಮಾಡಿದರೆ ಸ್ವರ್ಗಲಾಭ ಇದೆ. ಅಲ್ಲಿ ಅಮೃತ-ಅಪ್ಸರೆಯರಿರುತ್ತಾರೆ' ಮುಂತಾದ ಪ್ರಲೋಭನೆಗಳಿಂದ ಮಾಡುವ ಧರ್ಮಾಚರಣೆಯೂ ಬೆಲೆ ಕಳೆದುಕೊಳ್ಳುತ್ತದೆ. ಮುಂದೆ ಮೂಲಂಗಿ ಹಿಡಿದು ಸಾಗಿದಾಗ ಅದರ ಆಸೆಯಿಂದ ಹೆಜ್ಜೆ ಹಾಕುವ ಕತ್ತೆಯ

ಸ್ಥಿತಿ ನಮ್ಮದಾಗಬಾರದು. ಯಜ್ಞದ ವೈಶಾಲ್ಯ ಹಾಗೂ ಅದರಿಂದಾಗುವ ಲೋಕಕಲ್ಯಾಣದ ಸೂಕ್ಷ್ಮ ಬಗೆಯನ್ನು ಅರಿಯಲಾಗದ ಮಂದಿಗೆ ಶಾಸ್ತ್ರವು **'ಸ್ವರ್ಗಕಾಮೋ ಯಜೇತ' 'ಅನ್ಯಥಾ ನರಕೇ ಪತೇತ್'** ಎನ್ನುತ್ತಾ, ಸ್ವರ್ಗದ ಆಸೆ, ನರಕದ ಭಯಗಳನ್ನು ತೋರಿಸುತ್ತಾ ಬಾಲ ವಟುವಿಗೆ ಸಿಹಿತಿಂಡಿಯ ಆಸೆ ಅಥವಾ ಬೆತ್ತದಭಯ ತೋರಿಸಿ ಓದಿನಲ್ಲಿ ತೊಡಗಿಸುವಂತೆ ಯಜ್ಞದಲ್ಲಿ ತೊಡಗಿಸುತ್ತದೆ.

ಈ ಸ್ವರ್ಗಾದಿ ಫಲಶ್ರುತಿಯು ರೋಗ ನಿವಾರಕ ಕಹಿಮಾತ್ರೆಗೆ ಅಂಟಿಸಿದ ಬೆಲ್ಲದ ಸಿಹಿಪಾಕ. **'ರೋಚನಾರ್ಥಂ ಫಲಶ್ರುತಿಃ'**.

ಅಗಸನ ಕತ್ತೆ ನಡೆಯಲಾಗದೆ ನಿಂತು ಬಿಟ್ಟಿತು. ಆ ಅಗಸ ಬೆತ್ತ ಬೀಸಿ ಭಯಪಡಿಸಿದ. ಕತ್ತೆ ನಡೆಯಲೊಲ್ಲದು. ಅಗಸ ಬುದ್ಧಿವಂತ. ಜೊತೆಗಿದ್ದ ನಾಲ್ಕು ಮೂಲಂಗಿಯನ್ನು ಉದ್ದಕೋಲಿಗೆ ಕಟ್ಟಿದ. ಮೇಲೆ ಕುಳಿತು ಕತ್ತೆಯ ಮುಖದ ಮುಂದೆ ಹಿಡಿದ. ಮೂಲಂಗಿ ಕತ್ತೆಯನ್ನು ಪ್ರಲೋಭಿಸಿತು. ತಿನ್ನುವ ಆಸೆಯಿಂದ ಕತ್ತೆ ಮುಂದೆ ಸಾಗಿತು. ಅದು ಮುಂದೆ ಸಾಗಿದಂತೆ ಆ ಮೂಲಂಗಿಯೂ ಮುಂದೆ ಸಾಗುತ್ತಿತ್ತು.

ಬುದ್ಧಿವಂತ ಮಹರ್ಷಿಗಳೂ ಅಪೌರುಷೇಯ ವೇದಗಳೂ ಯಜ್ಞಗಳಿಗೆ ಫಲವನ್ನು ಹೇಳಿದ್ದು ಕೇವಲ ಪ್ರಲೋಭನೆಯೋ? ಯಾಜ್ಞಿಕರೆಲ್ಲರೂ ಬುದ್ಧಿವಂತ ಸ್ವಾರ್ಥಿ ಮಹರ್ಷಿಗಳ ಪ್ರಲೋಭನೆಗೆ ಒಳಗಾಗಿ ಕುಣಿಯುವ ಕತ್ತೆಗಳೋ?

ಸರ್ವಥಾ ಅಲ್ಲ. ಒಂದು ದೃಷ್ಟಾಂತವನ್ನು ದೃಷ್ಟಾಂತವೆಂದಷ್ಟೇ ಪರಿಗ್ರಹಿಸಬೇಕು. ಎಲ್ಲವನ್ನು ಅನ್ವಯಿಸಿ ಆಗ್ರಹಿಸಬಾರದು. ಸ್ವರ್ಗಾದಿ ಫಲದ ಉದ್ದೇಶಕ್ಕಿಂತ ಹೊರತಾಗಿ ಬೇರೆ ಉದಾತ್ತಧ್ಯೇಯವಿಲ್ಲದ ಯಜ್ಞಕರ್ತೃವಿನ ಸ್ಥಿತಿ ಕತ್ತೆಯ ಸ್ಥಿತಿಗಿಂತ ಬೇರೆಯಲ್ಲವೆನ್ನದೇ ವಿಧಿಯಿಲ್ಲ.

ಮಾತ್ರೆಗೆ ಅಂಟಿದ ಬೆಲ್ಲ ಸಿಹಿಯ ಅನುಭವವನ್ನು ಕೊಟ್ಟೇ ಕೊಡುತ್ತದೆ. ಆದರೆ ರೋಗನಿವರ್ತಕ ಮಾತ್ರೆಗೆ ಸಿಹಿಯ ಅನುಭವವಷ್ಟೇ ಫಲವಲ್ಲ. ಅಂತೆಯೇ ಯಜ್ಞದಿಂದ ಸ್ವರ್ಗಾದಿ ಫಲಗಳು ಲಭಿಸುತ್ತವೆ. ಗಣಹೋಮದಿಂದ ವಿಘ್ನನಿವೃತ್ತಿ, ಧನ್ವಂತರಿಹೋಮದಿಂದ ರೋಗನಿವೃತ್ತಿ, ಆಯುಷ್ಯಹೋಮದಿಂದ ಆಯುರ್ವೃದ್ಧಿ ಮುಂತಾದ ಫಲ ಲಭಿಸಿಯೇ ಸಿದ್ಧ. ಅದಷ್ಟೇ ಅದರ ಫಲವಲ್ಲ. ಒಂದು ಹಂತಕ್ಕೇರಿದ ಮೇಲೆ ಅದರಾಚೆಗಿನ ಉದಾತ್ತ ಫಲದ ಬಗೆಗೆ ಅರಿತು ನಿರ್ವ್ಯಾಜಕರ್ಮದಲ್ಲಿ ಆಸಕ್ತನಾಗಬೇಕೆಂಬ ಎತ್ತರದ ಆಂತರ್ಯದಿಂದ **'ರೋಚನಾರ್ಥಂ ಫಲಶ್ರುತಿಃ'** ಎಂದಿದೆ ಭಾಗವತ.

ಪ್ರಾಚೀನಬರ್ಹಿಸ್ಸೆಂಬ ರಾಜನಿದ್ದ. ಯಜ್ಞಕರ್ಮವೆಂದರೆ ಅವನಿಗೆ ಪಂಚಪ್ರಾಣ. ಎಲ್ಲ ತೀರ್ಥಗಳಲ್ಲೂ ಈತ ದರ್ಭೆ ಹರಡಿದ. ಪೂರ್ವಾಭಿಮುಖ ದರ್ಭೆಯಲ್ಲಿ (ಪ್ರಾಚೀನ ಬರ್ಹಿಸ್ಸಿನಲ್ಲಿ) ಕುಳಿತು ಯಜ್ಞದೀಕ್ಷಿತನಾದ. ಇವನು ಬರ್ಹಿಸ್ಸು ಹರಡದ ಕ್ಷೇತ್ರವಿಲ್ಲ. ಆದ್ದರಿಂದಲೇ ಅನ್ವರ್ಥನಾಮಕನಾದ. ಇವನು ಯಜ್ಞದಲ್ಲಿ ಬಲಿಕೊಟ್ಟ ಪಶುಗಳಿಗೆ ಲೆಕ್ಕವಿಲ್ಲ. ಮಾಡಿದ ದಾನಕ್ಕೂ ಮಿತಿಯಿಲ್ಲ. ಆದರೆ ಇಲ್ಲಿ ವೈದಿಕ ಪ್ರಲೋಭನಗಳಿಗಿಂತ ಬೇರೆಯ ಉದ್ದೇಶ ಇರಲಿಲ್ಲ. ಇದೊಂದೇ ನ್ಯೂನತೆ. ಕ್ಷುದ್ರಕಾಮನೆಗಳು ಪರಿಶುದ್ಧಕರ್ಮದ ಕಪ್ಪುಚುಕ್ಕೆಗಳಾಗಿದ್ದವು.

ಆತನ ಉದ್ಧಾರಕ ಗುರುಗಳು ನಾರದರು. ಅವರೆಂದರು- ರಾಜನ್ ಒಮ್ಮೆ ತಲೆಯೆತ್ತಿ ನೋಡು. ನಿಜವಾದ ತಲೆಯಲ್ಲಿ ನೋಡು, ಅಲ್ಲಿ ನಿನ್ನನ್ನು ಕೈಬೀಸಿ ಕರೆಯುತ್ತಿವೆಯಲ್ಲಾ! ಸಿಟ್ಟಿನಿಂದ ಹಲ್ಲು ಕಡೆಯುತ್ತಿವೆ -ಯಲ್ಲಾ? ಅವು ನೀನು ಯಜ್ಞಕ್ಕಾಗಿ ಸಾಯಿಸಿದ ಪಶುಗಳು!! ನಿನ್ನ ಮೇಲೆ ಸೇಡು ತೀರಿಸಿಕೊಳ್ಳಲು ಕಾಯುತ್ತಿವೆ. ನೀನು ಸತ್ತು ಅಲ್ಲಿಗೆ ಹೋದಾಗ ಕಬ್ಬಿಣದ ಸಲಾಕೆಗಳಿಂದ ಚುಚ್ಚಿ ಕೋಪತೀರಿಸಿಕೊಳ್ಳುತ್ತವೆ.

**ಏತೇ ತ್ವಾಂ ಸಂಪ್ರತೀಕ್ಷಂತೇ ಸ್ಮರಂತೋ ವೈಶಸಂ ತವ ।**
**ಸಂಪರೇತಮ್ ಅಯಃಕೂಟೈಃ ಛಿಂದತ್ಯುತ್ಥಿತಮನ್ಯವಃ ॥**

(ಭಾಗವತ 4.15.8)

ಪ್ರಾಚೀನಬರ್ಹಿ ಕಕ್ಕಾಬಿಕ್ಕಿಯಾದ. ಅವನಿಗೆ ಭ್ರಮನಿರಸನವಾಗಿತ್ತು.

ನಾರದರು ಪುರಂದರೋಪಾಖ್ಯಾನವೆಂಬ ಒಗಟಿನ ಕಥೆ ಹೇಳಿ ರಾಜನನ್ನು ತಿದ್ದಿದರು. ಕೊನೆಗೆ ತೀರ್ಮಾನ ಕೊಟ್ಟರು **'ತತ್ಕರ್ಮ ಹರಿತೋಷಂ ಯತ್'** ಹರಿಪ್ರೀತಿಕರವಾದುದೇ ಕರ್ಮ. ಲಕ್ಷ್ಮೀನಾರಾಯಣ ಪ್ರೀತ್ಯರ್ಥಂ ಎಂದೇ ಸಂಕಲ್ಪಿಸು.

## ಸಾಲತೀರಿಸಲು ಯಜ್ಞ

**"ಜಾಯಮಾನೋ ಹ ವೈ ಬ್ರಾಹ್ಮಣಃ ತ್ರಿಭಿರ್ಋಣವಾ ಜಾಯತೇ, ಬ್ರಹ್ಮಚರ್ಯೇಣ ಋಷಿಭ್ಯೋ ಯಜ್ಞೇನ ದೇವೇಭ್ಯಃ ಪ್ರಜಯಾ ಪಿತೃಭ್ಯಃ"** ಎಂಬ ಈ ಶ್ರುತಿ ಮನುಜ ಹುಟ್ಟುವಾಗಲೇ ಜೊತೆಗಿರುವ ಮೂರು ಸಾಲಗಳ ಬಗ್ಗೆ ನಮ್ಮ ಗಮನವನ್ನು ಸೆಳೆಯುತ್ತಿದೆ. ಇವೇ ಋಣತ್ರಯ. ಋಷಿಋಣ, ದೇವಋಣ ಹಾಗೂ ಪಿತೃಋಣ.

"ಬ್ರಹ್ಮಚರ್ಯದಿಂದಾಗಿ ಋಷಿಋಣದಿಂದ ಬಿಡುಗಡೆ. ಯಜ್ಞದ ಮೂಲಕ ದೇವಋಣದಿಂದ ಮುಕ್ತಿ. ಸತ್ಸಂತತಿಯನ್ನು ಪಡೆಯುವುದರಿಂದ ಪಿತೃಋಣ ಸಂದಾಯ.

ಕ್ರಾಂತದರ್ಶಿಗಳಾದ ಋಷಿಗಳ ಪರಂಪರೆಯಲ್ಲಿ ನಾವು ಬಂದಿದ್ದೇವೆ. ಭೃಗು, ವಸಿಷ್ಠ, ವಿಶ್ವಾಮಿತ್ರರ ಹೆಸರು ಹೇಳಿ ಅಂಥವರ ಗೋತ್ರ ನಮ್ಮದು ಎಂದು ಹೇಳಿಕೊಳ್ಳುತ್ತೇವೆ. ಆ ಮುನಿಗಳ ಅಂತಃಸತ್ವ ನಮ್ಮ ಧಮನಿಗಳಲ್ಲಿ ಹರಿಯುತ್ತಿದೆ. ಅವರು ಸಾಧಿಸಿಕೊಟ್ಟು ಹೋದ ಜ್ಞಾನರಾಶಿ ಇಂದು ನಮ್ಮನ್ನು ಮನುಷ್ಯರನ್ನಾಗಿಸಿದೆ. ಅವರ ದರ್ಶನದಿಂದ ಲಭ್ಯವಾದ ವೇದಮಂತ್ರಗಳ ಮೂಲಕ ಗರ್ಭಾಧಾನಾದಿ ಸಂಸ್ಕಾರಗಳನ್ನು ಪಡೆದು ಜನಿಸಿದವರು ನಾವು. ಅವರಿಂದ ಪಡೆದ ಉಪಕಾರ ಅಪಾರ. ಇದೇ ಋಷಿಋಣ.

**ಬ್ರಹ್ಮಚರ್ಯೇಣ ಋಷಿಭ್ಯಃ** – ಇದರ ಪರಿಹಾರ ಬ್ರಹ್ಮಚರ್ಯದಿಂದ. ಬ್ರಹ್ಮವೆಂದರೆ ವೇದ, ಶಾಸ್ತ್ರ. ಅದರ ಚರಣವೆಂದರೆ ಅಧ್ಯಯನ.

ಸ್ವಾರ್ಥದ ಕಿಂಚಿತ್ತು ಲೇಪವಿಲ್ಲದೇ ಕೇವಲ ಲೋಕಕಲ್ಯಾಣದ ದೃಷ್ಟಿಯಿಂದ ದಯಾಲು ಋಷಿ-ಮುನಿಗಳು ವೇದ-ಪುರಾಣಾದಿ ಶಾಸ್ತ್ರವನ್ನು ಕೊಟ್ಟರು. ಅದನ್ನು ಉಳಿಸದೆ ಹೋದರೆ ಅದಕ್ಕಿಂತ ದೊಡ್ಡ ಕೃತಘ್ನತೆಯುಂಟೇ? ಉಳಿಸುವುದೆಂದರೆ ಓದುವುದು, ಪಾಠಮಾಡುವುದು. ಇಷ್ಟನ್ನೇ ಮಾಡಿದರೂ ಋಷಿಗಳು ಪ್ರಸನ್ನರಾಗುತ್ತಾರೆ. ವೇದ ಶಾಸ್ತ್ರಾಧ್ಯಯನವನ್ನು ಮಾಡುವ ವ್ಯಕ್ತಿ ಋಷಿಋಣದಿಂದ ಮುಕ್ತನಾಗುತ್ತಾನೆ.

ಇದೇ ಬ್ರಹ್ಮಯಜ್ಞ. ಇಂದು ಎಲ್ಲಾ ವೇದಶಾಸ್ತ್ರಗಳ ಮೊದಲ ಭಾಗದ ಒಂದೊಂದು ತುಣುಕುಗಳನ್ನು ಹೇಳಿಕೊಳ್ಳುವಲ್ಲಿ ಬ್ರಹ್ಮಯಜ್ಞ ಉಳಿದುಕೊಂಡಿದೆ.

ಇನ್ನೊಂದು ಥರದ ಬ್ರಹ್ಮಚರ್ಯವಿದೆ. ಅದು ಗೃಹಸ್ಥೇತರನಿಗೆ ಊರ್ಧ್ವರೇತಸ್ಕತೆ. ಗೃಹಸ್ಥನಿಗೆ ನಿಷಿದ್ಧದಿನದಂದು ಪತ್ನೀಸಹವಾಸ ಮಾಡದಿರುವಿಕೆ. ವಿಹಿತದಿನಗಳಲ್ಲೂ ರತಿಯಲ್ಲಿ ಯಜ್ಞಾನುಸಂಧಾನ ಹಾಗು ಪರಸ್ತ್ರೀಯರನ್ನೆಂದೂ ಚಿಂತಿಸದಿರುವುದು. ಈ ರೀತಿಯ ನಿಷ್ಠೆಯಲ್ಲಿರುವ ಗೃಹಸ್ಥನೂ ಬ್ರಹ್ಮಚರ್ಯ ಭ್ರಷ್ಟನಾಗಲಾರ.

ಗೃಹಸ್ಥ ಭ್ರಷ್ಟಬ್ರಹ್ಮಚರ್ಯನಾಗದಿರಲು ಪತ್ನೀಸಹವಾಸವನ್ನು ತ್ಯಜಿಸಬೇಕಾದ ದಿನಗಳನ್ನು ಬೋಧಾಯನಗೃಹ್ಯ ಪರಿಭಾಷೆ ನಿರೂಪಿಸಿದೆ. ಅವೆಂದರೆ - ವಿವಾಹವಾಗಿ ಮೂರು ರಾತ್ರಿ. ರಜಸ್ಸು ದಿನದಿಂದ(ರಜಸ್ವಲೆ ಯಾದ) ಮೂರು ರಾತ್ರಿ. ಅಮಾವಾಸ್ಯೆ, ಹುಣ್ಣಿಮೆ, ಸಂಕ್ರಾಂತಿಗಳಂದು. ಶ್ರಾದ್ಧವನ್ನು ಮಾಡಿ ಅಥವಾ ಶ್ರಾದ್ಧಭೋಜನವನ್ನು ಮಾಡಿದ ದಿನದಂದು ಒಂದು ರಾತ್ರಿ. ಹಗಲಿನ ಹೊತ್ತು ಆಜೀವ ಪರ್ಯಂತ. ಆಗ್ರಯಣೀ ಮೊದಲಾದ ಶ್ರೌತಯಜ್ಞಗಳನ್ನು ಮಾಡಿದಂದು ಒಂದು ರಾತ್ರಿ.

**ಅತ ಊರ್ಧ್ವಂ ಬ್ರಹ್ಮಚರ್ಯಂ ಯೇನಾನೃಣೋ ಭವತಿ । ಸ್ವದಾರ ಇತ್ಯೇಕಂ । ಮಂತ್ರವತ್ ಪ್ರಯೋಗ ಇತ್ಯೇಕಂ । ಋತಾವಿತ್ಯಪರಮ್ । ಅಥಾದಿ ಬ್ರಹ್ಮಚರ್ಯಮ್ – ವಿವಾಹೇ ತ್ರಿರಾತ್ರಂ । ಋತೌ ತ್ರಿರಾತ್ರಂ । ಅಮಾವಾಸ್ಯಾಯಾಂ**

**ಪೌರ್ಣಮಾಸ್ಯಾಂ ಶ್ರಾದ್ಧಂ ದತ್ವಾ ಭುಕ್ತ್ವಾ ಚೈಕರಾತ್ರಂ। ಪರಸ್ತ್ರೀಷು ದಿವಾ ಯಾವಜ್ಜೀವಮ್......ತದೇತದ್ಧರ್ಮ್ಯಂ ಪುಣ್ಯಂ ಪುತ್ರ್ಯಮಾಯುಷ್ಯಂ ಸ್ವರ್ಗ್ಯಂ ಯಶಸ್ಯಮಾನೃಣ್ಯಮಿತಿ ವ್ಯಾಖ್ಯಾತಂ ಬ್ರಹ್ಮ ಚರ್ಯಂ । (ಬೋಧಾಯನ ಗೃಹ್ಯ ಪರಿಭಾಷಾ)**

"ಈ ಬ್ರಹ್ಮಚರ್ಯವೂ ಋಷಿಋಣದ ಪರಿಹಾರಕ್ಕೆ ಮಾರ್ಗ, ವಸ್ತುತಃ ವೇದಶಾಸ್ತ್ರಾಧ್ಯಯನದಿಂದಲೇ ಋಷಿಋಣ ಪರಿಹಾರ. ಆದರೆ ಇಲ್ಲಿ ಹೇಳಿದ ಕನಿಷ್ಠ ಬ್ರಹ್ಮಚರ್ಯವಿಲ್ಲದ ವಿಷಯಲಂಪಟನಿಂದ ವೇದ ಶಾಸ್ತ್ರಗಳ ಸರಿಯಾದ ಆಂತರ್ಯವನ್ನು ಗ್ರಹಿಸುವುದು ಅಸಾಧ್ಯ. ಆತ್ಮ ನಿಯಂತ್ರಣವಿಲ್ಲದ ಆತ ಶಾಸ್ತ್ರನಿಯಂತ್ರಣವನ್ನು ಸಾಧಿಸಲಾರ. ಆತನನ್ನು ಶಾಸ್ತ್ರವೂ ನಿಯಂತ್ರಿಸಲಾರದು. ಆದ್ದರಿಂದ ಅಧ್ಯಯನಕ್ಕೆ ಸಹಕಾರಿಯೆಂಬ ಕಾರಣದಿಂದ ಸ್ವಸ್ತ್ರೀ ಮಾತ್ರದಲ್ಲಿ ನಿಯತರತಿಯೆಂಬ ಬ್ರಹ್ಮಚರ್ಯವು ಋಷಿಋಣಾಪಾಕರಣಕ್ಕೆ ಅಂಗವಾಗಿದೆ.

**ಪ್ರಜಯಾ ಪಿತೃಭ್ಯಃ** – ನಮ್ಮ ಜನನಕ್ಕೆ ಕಾರಣೀಭೂತರಾಗಿದ್ದು ಹೊತ್ತು ಹೆತ್ತು ಸಲಹಿದ ಪಿತೃಗಳ ಉಪಕಾರಕ್ಕೆ ಪ್ರತಿಯಾಗಿ ನಾವು ಸಂತತಿಯನ್ನು ಮುಂದುವರೆಸಬೇಕು. ಶಾಸ್ತ್ರೋಕ್ತವಿಧಿಯಿಂದ ವಿವಾಹಿತ ನಾಗಿ ಸತ್ಸಂತತಿಯನ್ನು ಪಡೆದು ಪಿಂಡೋದಕಾದಿ ಕ್ರಿಯೆಗಳಿಗೆ ಅಧಿಕಾರಿ ಯೋರ್ವನನ್ನು ವ್ಯವಸ್ಥೆಮಾಡುವುದರ ಮೂಲಕ ಅಲ್ಲದೇ ಶ್ರಾದ್ಧ ತರ್ಪಣಾದಿರೂಪ ಪಿತೃಯಜ್ಞದಿಂದ ಪಿತೃಋಣದ ಪರಿಹಾರ.

**ಯಜ್ಞೇನ ದೇವೇಭ್ಯಃ** – ಕೊನೆಯದಾಗಿ ದೇವಋಣದ ಪರಿಹಾರ ಯಜ್ಞದಿಂದ. ನಮ್ಮ ಜನನದ ಹಿಂದೆ ದೈವೀ ಅನುಗ್ರಹವಿದೆ. ನವಗ್ರಹ ದೇವತೆಗಳ ಪ್ರಭಾವವಿದೆ. ಮನುಷ್ಯನಾಗಿ ಹುಟ್ಟಿಸಿದ ದೇವನಿಗೆ ನಾವು ಚಿರಋಣಿಗಳು. ಗರ್ಭದಲ್ಲಿ ನೀರು, ಗಾಳಿ, ಉಷ್ಣತೆಗಳನ್ನಿತ್ತು ಕಾಪಾಡಿದ ದೇವನಿಗೆ ನಾವು ಅಧಮರ್ಣರು. ಗರ್ಭದಲ್ಲಿ ಪರಿರಕ್ಷಿಸಿ ಅಂಗನ್ಯೂನತೆ ಯಿಲ್ಲದ ಈ ಪೂರ್ಣತೆಗೆ ಕಾರಣಕರ್ತನೆನಿಸಿದ ಆತನಿಗೆ ಆಭಾರಿಗಳು.

ಈ ದೇವಋಣವನ್ನು ಪರಿಹರಿಸಿಕೊಳ್ಳಲು "ಯಜ್ಞ"ವೊಂದೇ ಮಾರ್ಗ. ದೇವಋಣದ ಪರಿಹಾರಕ್ಕಾಗಿ ಮನುಷ್ಯನು ಪ್ರತಿಮೆ, ಸಾಲಗ್ರಾಮಗಳಲ್ಲಿ ದೇವನನ್ನು ಪೂಜಿಸುತ್ತಾನೆ. ತಾನು ಉಣ್ಣುವುದಕ್ಕೆ ಮೊದಲು ವೈಶ್ವದೇವ ಹೋಮವನ್ನು ಮಾಡಿ ಅಗ್ನಿಪ್ರತೀಕದಲ್ಲಿ ದೇವನನ್ನು ಆರಾಧಿಸುತ್ತಾನೆ. ಈ ಪ್ರಕ್ರಿಯೆಗಳೆಲ್ಲಾ 'ದೇವಯಜ್ಞ' ಎಂದೆನಿಸಿವೆ.

## ಭೂತಯಜ್ಞ – ಗೋಗ್ರಾಸ

ಬ್ರಹ್ಮಯಜ್ಞ, ದೇವಯಜ್ಞ, ಪಿತೃಯಜ್ಞಗಳೆಂಬ ಮೂರು ಯಜ್ಞ ಗಳನ್ನು ಗಮನಿಸಿದ್ದೇವೆ. ಇವಲ್ಲದೇ ಮನುಷ್ಯಯಜ್ಞ ಹಾಗೂ ಭೂತ ಯಜ್ಞಗಳೆಂಬ ಎರಡು ಯಜ್ಞಗಳೂ ಇವೆ. ಗೃಹಸ್ಥನಿಗೆ ಈ ಐದು ಯಜ್ಞಗಳು ಕರ್ತವ್ಯ.

ಮನೆಗೆ ಹಸಿದು ಬಂದ ವ್ಯಕ್ತಿಗೆ ಆತಿಥ್ಯವಿತ್ತು ಉಣಬಡಿಸುವಿಕೆಯೇ ಮನುಷ್ಯಯಜ್ಞ. ಈ ಯಜ್ಞದಲ್ಲಿ ಹಸಿದ ವ್ಯಕ್ತಿಯೇ ಅಗ್ನಿ. ಅನ್ನ ಭೋಜ್ಯಗಳೇ ಆಹುತಿ. 'ಅನ್ನಸ್ಯ ಕ್ಷುಧಿತಂ ಪಾತ್ರಂ' ಎಂಬಂತೆ ಅನ್ನದಾನಕ್ಕೆ ಹಸಿದ ವ್ಯಕ್ತಿಗಳೆಲ್ಲಾ ಪಾತ್ರರು.

ಬರಿಯ ಅನ್ನದಾನವಲ್ಲದೇ ನಾಲ್ಕು ಜನರಿಗೆ ಉಪಕರಿಸುವ ಎಲ್ಲಾ ಸಮಾಜೋಪಯೋಗಿ ಸೇವೆಗಳೂ ಮನುಷ್ಯಯಜ್ಞದ ಪರಿಧಿಯಲ್ಲೇ ಸೇರಿವೆ. ನಾಲ್ಕನೆಯದಾದ ಈ ಮನುಷ್ಯಯಜ್ಞದಿಂದ ಸಮಾಜದ ಋಣ ಪರಿಹಾರವಾಗುತ್ತದೆ.

ಕೊನೆಯದು ಭೂತಯಜ್ಞ. ಅಂದರೆ ಪಶುಪ್ರಾಣಿಗಳಿಗೆ ಆಹಾರ ನೀಡುವಿಕೆ.

ಮನುಷ್ಯ ತನ್ನ ಬದುಕಿನಲ್ಲಿ ಗೋವೃಷಭಾದಿ ಪಶುಗಳ ಉಪಕಾರ ಮರೆಯುವಂತಿಲ್ಲ. ಆತ ಗವ್ಯಗಳಾದ ಹಾಲು,ಮೊಸರು,ತುಪ್ಪಗಳಿಲ್ಲದೇ ಬದುಕಲಾರ. ದೇವಕರ್ಮಗಳನ್ನು ನಿರ್ವಹಿಸಲಾರ. ಹುಟ್ಟಿದ ಮೊದಲಲ್ಲಿ ತಾಯಿ ಆತನಿಗೆ ಹಾಲು ಕೊಟ್ಟು ಬೆಳೆಸಿದರೆ ಮುಂದಿನ ಆತನ ಜೀವನ ಪೂರ್ತಿ ಈ ಗೋಮಾತೆ ಹಾಲು ಕೊಡುತ್ತಾಳೆ. ಆದ್ದರಿಂದಲೇ

ಗೋವಿಗೆ ಮಾತೃಸ್ಥಾನ, ವೃಷಭಕ್ಕೆ ಪಿತೃಸ್ಥಾನವಿದೆ. ತಂದೆಯು ಅನ್ನವಿತ್ತು ಪರಿಪೋಷಿಸುತ್ತಾನೆ. ಎತ್ತು ತಾನು ಉತ್ತು ಧಾನ್ಯ ಬೆಳೆಸುತ್ತದೆ. ತನ್ನ ಗೊಬ್ಬರದಿಂದ ಧಾನ್ಯ ಬೆಳೆಗೆ ನೆರವಾಗುತ್ತದೆ. ಗಾಡಿ ಹೊತ್ತು ಧಾನ್ಯವನ್ನು ಮನೆಗೆ ಹೊರುತ್ತದೆ. ಆದ್ದರಿಂದಲೇ **"ಗಾವೋ ಮೇ ಮಾತರಃ ಸರ್ವಾಃ ಪಿತರಶ್ಚಾಪಿ ಗೋವೃಷಾಃ"**

ಇಂತಹ ಗೋವುಗಳಿಗೆ ಸಾಧ್ಯವಾದಷ್ಟು ಪ್ರತ್ಯುಪಕರಿಸಬೇಕು. ಈ ಮೂಲಕ ಭೂತಋಣದಿಂದ ಮುಕ್ತನಾಗಬೇಕು. ಉಳ್ಳವನು ಗೋಮಾಳವನ್ನು ರಕ್ಷಿಸುತ್ತಾನೆ. ಗೋಶಾಲೆಯನ್ನು ನಿರ್ವಹಿಸಬಲ್ಲ. ಕೊನೇ ಪಕ್ಷ ಪ್ರತಿದಿನ ಉಣ್ಣುವುದಕ್ಕೆ ಮುಂಚೆ ಒಂದು ಮುಷ್ಟಿ ಅನ್ನವನ್ನಾದರೂ ಗೋವಿಗಾಗಿ ತೆಗೆದಿಡಬೇಕು. ಇಂದು **'ಗೋಗ್ರಾಸ'** ಎಂಬ ಹೆಸರಿನಲ್ಲಿ ಭೂತಯಜ್ಞ ಉಳಿದುಕೊಂಡಿದೆ.

ಯಾವುದೇ ಯಜ್ಞಕರ್ಮ, ಪೂಜೆ, ಪಿತೃಕರ್ಮಗಳು ಗೋಗ್ರಾಸ –ವನ್ನಿಡದೇ ಪೂರ್ಣವಾಗವು.

ಯಜ್ಞ, ಶ್ರಾದ್ಧಾದಿಗಳಲ್ಲಿ ವಿಪ್ರಭೋಜನದಂತೆಯೇ ಗೋಗ್ರಾಸ ದಾನವೂ ಅನಿವಾರ್ಯ ಕರ್ತವ್ಯವಾಗಿದೆ.

ಅಲ್ಲದೇ ಗೋಗ್ರಾಸದಾನವು ನಿತ್ಯಕರ್ಮ. ಅದನ್ನು ಮಾಡದಿರುವುದು ಅಪರಾಧ. ಯಾವುದನ್ನು ಮಾಡದಿದ್ದರೆ ಪಾಪ ಬರುವುದೋ ಅದು ನಿತ್ಯಕರ್ಮ. **"ಯದಕರಣೇ ಪ್ರತ್ಯವಾಯಸ್ತನ್ನಿತ್ಯಮ್"**

ಗವ್ಯಪದಾರ್ಥಗಳನ್ನೆಲ್ಲಾ ಯಥೇಷ್ಟವಾಗಿ ಉಪಯೋಗಿಸಿಕೊಳ್ಳುವ ವ್ಯಕ್ತಿ ಅವನ್ನು ಕೊಟ್ಟ ಗೋವಿಗೆ ಪ್ರಕೃತಿದತ್ತವಾದ ಹಿಡಿಹುಲ್ಲಿನ ಜೊತೆ ತಾನು ಉಣ್ಣುವ ಅನ್ನದಲ್ಲಿ ಒಂದು ಮುಷ್ಟಿಯನ್ನಾದರೂ ತೆಗೆದಿಡದಿದ್ದರೆ ಆತ ಕೃತಘ್ನನಾಗಲಾರನೇ?

ಅಲ್ಲದೇ ಗೋವು ಸಕಲದೇವತೆಗಳಿಗೆ ಅಧಿಷ್ಠಾನ. **'ಗವಾಮಂಗೇಷು ತಿಷ್ಠಂತಿ ಭುವನಾನಿ ಚತುರ್ದಶ'**. ಹದಿನಾಲ್ಕು ಲೋಕಗಳು ಗೋವಿನ ಅಂಗಾಂಗಗಳಲ್ಲಿ ಅಧಿಷ್ಠಿತ ಎಂಬ ಮಾತಿದೆ. ಗೋಗ್ರಾಸದಿಂದಲೇ ಗೋಪಾಲಕೃಷ್ಣ ಪ್ರಸನ್ನನಾಗುತ್ತಾನೆ.

ಗೋಗ್ರಾಸದಾನದ ಶಾಸ್ತ್ರವಿಧಿ ಬಹಳ ಸಣ್ಣದು. ಬಾಳೆ ಎಲೆ ಮೊದಲಾದ ಗೋವು ತಿನ್ನಬಹುದಾದ ಎಲೆಯಲ್ಲಿ ಏಕಪುರುಷ ಪರ್ಯಾಪ್ತವಾದ ಅನ್ನ ಪಾಯಸಭಕ್ಷ್ಯಗಳನ್ನು ಬಡಿಸಿ ಎಲೆಯನ್ನು ಪೂರ್ವಾಗ್ರವಾಗಿ ಇಡಬೇಕು. ಆ ಅನ್ನಕ್ಕೆ ತೀರ್ಥಹಾಕಿ ಸೊಬಗಿನ ಅರ್ಥವುಳ್ಳ ಈ ಎರಡು ಶ್ಲೋಕಗಳನ್ನು ಹೇಳಬೇಕು –

**ಸುರಭಿರ್ವೈಷ್ಣವೀ ಮಾತಾ ನಿತ್ಯಂ ವಿಷ್ಣುಪದೇ ಸ್ಥಿತಾ ।**
**ಗೋಗ್ರಾಸಸ್ತು ಮಯಾ ದತ್ತಃ ಸುರಭೇ(ಸುರಭಿ) ಪ್ರತಿಗೃಹ್ಯತಾಮ್ ॥ 1 ॥**

**ಗಾವೋ ಮೇ ಮಾತರಃ ಸರ್ವಾಃ ಪಿತರಶ್ಚಾಪಿ ಗೋವೃಷಾಃ ।**
**ಗ್ರಾಸಮುಷ್ಟಿಪ್ರದಾನೇನ ಸ ಮೇ ವಿಷ್ಣುಃ ಪ್ರಸೀದತು ॥ 2 ॥**

"ದೇವಲೋಕದ ಕಾಮಧೇನು ಸುರಭಿ. ಕಾಮಧೇನುವಿನ ಜಾತಿಯೆನಿಸಿದ ಗೋಜಾತಿಯಲ್ಲಿ ಬಂದ ಎಲ್ಲಾ ಗೋವುಗಳನ್ನೂ ಕಾಮಧೇನುವಿನ ಸನ್ನಿಧಾನದ ಅನುಸಂಧಾನದೊಡನೆ 'ಸುರಭಿ' ಎಂದೇ ಕರೆಯಲಾ–ಗುತ್ತದೆ. ಸುರಭಿಯು ವಿಷ್ಣುದೇವನ ಪ್ರತೀಕ. ಆಕೆ ಎಲ್ಲರಿಗು ಹಾಲು ನೀಡುವ ತಾಯಿ. ಎಂದೆಂದಿಗೂ ವಿಷ್ಣುಪದದಲ್ಲಿ ನೆಲೆಗೊಂಡ ಈ ಸುರಭಿ ನಾನಿತ್ತ ಗೋಗ್ರಾಸವನ್ನು ಸ್ವೀಕರಿಸಲಿ"

"ಹಸುಗಳೆಲ್ಲಾ ನಮ್ಮ ತಾಯಿ. ಎತ್ತುಗಳೆಲ್ಲಾ ನಮ್ಮ ತಂದೆಗೆ ಸಮ. ಅಂತಹ ಗೋವುಗಳಿಗಿತ್ತ ಈ ಮುಷ್ಟಿ ತುತ್ತಿನಿಂದ ಗೋವಿನ ಒಳಗಿರುವ ಶ್ರೀಕೃಷ್ಣ ಪ್ರೀತನಾಗಲಿ"

ಈ ಎರಡು ಶ್ಲೋಕಗಳಿಂದ ಪ್ರಾರ್ಥಿಸಿ **'ಗವಾಂತರ್ಗತ ಗೋಪಾಲ ಕೃಷ್ಣಃ ಪ್ರೀಯತಾಮ್'** ಎಂದು ಗೋಗ್ರಾಸವನ್ನು ಗೋವಿಗೆ ನೀಡಬೇಕು.

ಪಟ್ಟಣದಲ್ಲಿ ವ್ಯವಹಾರದಲ್ಲಿ ಬಿದ್ದ ಜನತೆಗೆ ಇಂದು ಗೋಗ್ರಾಸ ನೀಡುವುದು ಕ್ಲೇಶವೆನಿಸಿದೆ. ಆದರೂ ಆತ ಒಂದು ವಿಷಯವನ್ನು ಗಮನಿಸಬೇಕು. ತಾನು ಹಸುವನ್ನು ಸಾಕದಿದ್ದರೂ ಹಾಲು ಕುಡಿಯು ವುದನ್ನು ಬಿಡಲಿಲ್ಲ. ಆದ್ದರಿಂದ ಹಸುವನ್ನು ಸಾಕುವ ಜವಾಬ್ದಾರಿ ಅವನಿಗಿದೆ. ಅದಕ್ಕಾಗಿ ಗೋಗ್ರಾಸದ ಹೆಸರಿನಲ್ಲಿ ಸ್ವಲ್ಪವಾದರೂ ಧನವನ್ನು ತೆಗೆದಿಡುವ ಕೆಲವನ್ನು ಆತ ಮಾಡಬಹುದು. ಆ ಹಣವನ್ನು ದೊಡ್ಡ ಮೊತ್ತವಾದಾಗ ಅಲ್ಲಲ್ಲಿ ನಡೆಯುತ್ತಿರುವ ಗೋಶಾಲೆಗಳಿಗೆ ನೀಡಿ ಭೂತ ಯಜ್ಞದ ಫಲ ಪಡೆಯಬಹುದು. ಧರ್ಮದ ನಡೆ ಆಧುನಿಕತೆಯಲ್ಲಿ ಕ್ಲಿಷ್ಟವೆನಿಸಿದರೂ ಮನಸ್ಸಿದ್ದಲ್ಲಿ ಮಾರ್ಗವಿದ್ದೇ ಇದೆ.

ಹೀಗೆ ಗೃಹಸ್ಥನಿಗೆ ನಿತ್ಯಕರ್ಮಗಳಾಗಿ ಐದು ಯಜ್ಞಗಳು. ಇವೇ ಪಂಚಯಜ್ಞ.

**ಬ್ರಹ್ಮಯಜ್ಞೋ ದೇವಯಜ್ಞಃ ಪಿತೃಯಜ್ಞಸ್ತಥೈವ ಚ ।**
**ಮನುಷ್ಯಭೂತಯಜ್ಞೌ ಚ ಪಂಚಯಜ್ಞಾಃ ಪ್ರಕೀರ್ತಿತಾಃ ॥**

ಈ ಐದು ಯಜ್ಞಗಳನ್ನು ನಡೆಸುವಲ್ಲಿ ಪ್ರಯತ್ನಶೀಲನಾದ ಗೃಹಸ್ಥ ವ್ಯಕ್ತಿ ಮುಂದೆ ಹೇಳುವ ಹೋಮ ಹವನಗಳನ್ನು ಮಾಡಲು ಅಥವಾ ಮಾಡಿಸಲು ಅರ್ಹ ಅಧಿಕಾರಿಯಾಗುತ್ತಾನೆ.

* * *

# ಅಗ್ನಿಮುಖ

ದೇವತೆಗಳನ್ನು ಉದ್ದೇಶಿಸಿ ಅಗ್ನಿಯಲ್ಲಿ ಆಹುತಿ ನೀಡುವಿಕೆಗೆ ಹೋಮವೆಂದು ಹೆಸರು. ಇಲ್ಲಿ ಉದ್ದೇಶಿಸುವ ದೇವತೆ, ಮಂತ್ರ ಹಾಗೂ ಹವ್ಯದ್ರವ್ಯಗಳ ವ್ಯತ್ಯಾಸದಿಂದ ಹೋಮಗಳಿಗೆ ಬೇರೆ ಬೇರೆ ಹೆಸರುಂಟಾಗುತ್ತದೆ. ಉದಾಹರಣೆಗೆ ಗಣಹೋಮ (ಗಣಪತಿಹೋಮ), ನವಗ್ರಹ ಹೋಮ, ವಾಸ್ತುಹೋಮ ಮೊದಲಾದವು ಉದ್ದಿಷ್ಟದೇವತೆಯ ಹೆಸರಿನಿಂದ ಚಾಲ್ತಿಗೆ ಬಂದ ಹೋಮಗಳು. ಗಣಪತಿಯನ್ನು ಉದ್ದೇಶಿಸಿ ಅಹುತಿ ಯಿತ್ತಾಗ ಅದು ಗಣಪತಿಹೋಮ, ನವಗ್ರಹಗಳು ಉದ್ದಿಷ್ಟರಾದರೆ ನವಗ್ರಹ ಹೋಮ. ವಾಸ್ತುಪುರುಷನಿಗೆ ಅಹುತಿಯಿತ್ತರೆ, ಅದು ವಾಸ್ತುಹೋಮ ವೆನಿಸುತ್ತದೆ.

ಬ್ರಹ್ಮಗಾಯತ್ರೀಮಂತ್ರದಿಂದ ಸವಿತೃದೇವತೆಗಳಿಗೆ ಆಜ್ಯದಿಂದ ಅಹುತಿಯಿತ್ತಾಗ ಅದು ಬ್ರಹ್ಮಗಾಯತ್ರಿ ಹೋಮವೆನಿಸುತ್ತದೆಯೇ ಹೊರತು ಸವಿತೃ ಹೋಮವೆಂದಲ್ಲ. ಹೀಗೆಯೇ ಅಷ್ಟಮಹಾಮಂತ್ರಹೋಮ, ಋಕ್‌ಸಂಹಿತಾ ಮಹಾಯಾಗ ಮೊದಲಾದುವೆಲ್ಲ ಮಂತ್ರದಿಂದಾಗಿ ಹೆಸರು ಪಡೆದಿವೆ.

ಕೆಲವೊಮ್ಮೆ ದೇವತೆ ಹಾಗೂ ಮಂತ್ರ ಇವೆರಡೂ ಒಂದೇ ಹೆಸರಿನವಾಗಿದ್ದು ಹೋಮನಾಮವಾಗುತ್ತದೆ. ಪವಮಾನ ಮಂತ್ರಗಳಿಂದ ಪವಮಾನನಿಗೆ ಅಹುತಿಯಿತ್ತಾಗ ಅದು ಪವಮಾನಹೋಮ, ಸುದರ್ಶನ ಮಂತ್ರದಿಂದ ಸುದರ್ಶನನಿಗೆ ದ್ರವ್ಯತ್ಯಾಗ ಮಾಡಿದಾಗ ಅದು ಸುದರ್ಶನ ಹೋಮ. ಹೀಗೆಯೇ ಧನ್ವಂತರಿಹೋಮ, ವೇದವ್ಯಾಸಹೋಮ ಮುಂತಾದವು.

ಇನ್ನು ಕೆಲವು ಪ್ರಧಾನದೇವತೆಯಿಂದಾಗಲೀ, ಮಂತ್ರದಿಂದಾಗಲೀ ಹೆಸರು ಪಡೆಯದೆ ಆಹುತಿ ನೀಡುವ ದ್ರವ್ಯದಿಂದ ಹೆಸರು ಪಡೆದಿದೆ. ತಿಲಹೋಮ ಸೋಮಯಾಗ ಮುಂತಾದವು.

ಬ್ರಹ್ಮಗಾಯತ್ರಿಯಿಂದ ಸವಿತೃನಾರಾಯಣನಿಗೆ ತಿಲದ್ರವ್ಯದಿಂದ ಅಹುತಿಯಿತ್ತಾಗ ಅದು ತಿಲಹೋಮವೆನಿಸುತ್ತದೆ. ಬ್ರಹ್ಮಕೂರ್ಚಹೋಮ, ಪ್ರತಿಷ್ಠಾಹೋಮ, ಆಯುಷ್ಯಹೋಮ ಮೊದಲಾದ ಬೆರಳೆಣಿಕೆಯ ಹೋಮಗಳು ಹಿಂದೆ ಹೇಳಿದ ಕಾರಣಗಳಿಗಿಂತ ಭಿನ್ನವಾದ ಕೆಲವು ವಿಶಿಷ್ಟಕಾರಣಗಳಿಂದ ಹೆಸರು ಪಡೆದಿವೆ.

ಈ ಹೋಮಗಳನ್ನು ಪ್ರತ್ಯೇಕವಾಗಿ ಅವಲೋಕಿಸುವುದಕ್ಕೆ ಮೊದಲು ಎಲ್ಲಾ ಹೋಮಗಳಲ್ಲಿ ಸಾಮಾನ್ಯವಾಗಿರುವ ಕೆಲವು ಸಂಗತಿಗಳನ್ನು ಗಮನಿಸೋಣ.

'ಅಗ್ನಿ' ಎಂದರೆ ಚಲನೆಯಿಲ್ಲದ ವಸ್ತುವಿಗೆ ಚಲನಶಕ್ತಿ ನೀಡುವಂತದ್ದು. ಚಲಿಸುವಂಥದು 'ಗ', ಚಲಿಸದಂಥದು ಅಗ('ನ ಗಚ್ಛತೀತಿ ಅಗಃ'). ಚಲನೆಯಿಲ್ಲದ ವಸ್ತುವಿಗೆ ಚಲನೆಯಿತ್ತು ಸಾಗಿಸುವವ ಅಗ್ನಿ(ಅಗಾನ್ ನಯತೀತ್ಯಗ್ನಿಃ), ಈ ಅರ್ಥದಲ್ಲಿ ಶ್ರೀಹರಿ ಮತ್ತು ಪ್ರಾಣದೇವ ಅಗ್ನಿಯೆನಿಸುತ್ತಾರೆ. ಆತನಿಲ್ಲದೆ ಯಾವ ವಸ್ತುವೂ ಚಲಿಸದು. **"ತೇನ ವಿನಾ ತೃಣಮಪಿ ನ ಚಲತಿ"**

ಬೆಂಕಿಯೂ ಅಗ್ನಿಯೇ. ಶರೀರದಲ್ಲಿ ಬೆಂಕಿ(ಬಿಸಿ)ಯಿಲ್ಲದೇ ನಮ್ಮ ಶರೀರ ಚಲಿಸದು. ಪಾತ್ರೆಯಲ್ಲಿರುವ ಚಲನೆಯಿಲ್ಲದ ನೀರು ಬೆಂಕಿಯ ಸಂಬಂಧದಿಂದ ಕುದಿಯತೊಡಗಿ ಚಲನೆಯನ್ನು ಪಡೆಯುತ್ತದೆ. ನಿಶ್ಚೇತನ ಕಟ್ಟಿಗೆಯೂ ಪಟಪಟವೆನ್ನುತ್ತಾ ಸಿಡಿಯತೊಡಗುತ್ತದೆ. ಹಾಗೆಯೇ ದೇವತೆಗಳಿಗೆ ಅರ್ಪಿಸಬೇಕಾದ ಹವಿರ್ದ್ರವ್ಯಗಳು ಸ್ವತಃ ಚಲನೆಯಿಲ್ಲದವು, ಅವಕ್ಕೆ ಚಲನೆಯಿತ್ತು ಆಯಾದೇವತೆಗಳಿಗೆ ತಲುಪಿಸುವವ ಅಗ್ನಿ. ಆತ ಹವ್ಯದ್ರವ್ಯದ ಅಸಾರಭಾಗವನ್ನು ಭಸ್ಮಮಾಡಿ ಸಾರಭಾಗವನ್ನು ಹೊತ್ತು ಆಯಾ ದೇವತೆಗಳ ಮುಖದಲ್ಲಿ ಅರ್ಪಿಸುತ್ತಾನೆ. ಅದಕ್ಕಾಗಿ ಅವನನ್ನು 'ಹವ್ಯವಾಹನ' ಎನ್ನಲಾಗಿದೆ. ಹವ್ಯವಾಹನ ಎಂದರೆ 'ಹೋಮಿಸಿದ ದ್ರವ್ಯಗಳನ್ನು ಹೊತ್ತು ತಲುಪಿಸುವವನು'

ಎಂದರ್ಥ. ವಹ್ನಿ(ವಹನ್ ನಯತೀತಿ ವಹ್ನಿಃ) ಎಂಬ ಹೆಸರೂ ಇದೇ ಅರ್ಥದಲ್ಲಿ ಹೋಮಾಗ್ನಿ -ಯನ್ನು ಹೇಳುತ್ತಿದೆ. **"ಅಗ್ನಿಮುಖಾ ವೈ ದೇವಾಃ"** ಎಂಬ ಶ್ರುತಿ ದೇವತೆಗಳನ್ನು ಅಗ್ನಿಮುಖಗಳೆಂದು ಕರೆದಿದೆ. ಭಗವಂತನ ಮುಖದಿಂದ ಅವಿರ್ಭವಿಸಿದವ ಅಗ್ನಿ. 'ಮುಖಾದಿಂದ್ರಶ್ಚಾಗ್ನಿಶ್ಚ' ಎಂದಿದೆ ಪುರುಷಸೂಕ್ತ. ಆದ್ದರಿಂದ ಅಗ್ನಿ ಮುಖದ(ಬಾಯಿಯ) ದೇವತೆ, ವಿಪ್ರನೂ ಮುಖದಿಂದ ಅವಿರ್ಭವಿಸಿದವ. **"ಬ್ರಾಹ್ಮಣೋಽಸ್ಯ ಮುಖಮಾಸೀತ್"** ಆದ್ದರಿಂದಲೇ ಭಗವಂತನೆನ್ನುತ್ತಾನೆ **"ರಸಂ ವಿಪ್ರಾಗ್ನಿಜಿಹ್ವಾಭ್ಯಾಮ್ ಅಶ್ನಾಮಿ ಪ್ರಯತಾತ್ಮನಃ"** ವಿಪ್ರಜಿಹ್ವೆ ಹಾಗೂ ಅಗ್ನಿಜಿಹ್ವೆಯ ಮೂಲಕ ನಾನು ಭಕ್ತನಿತ್ತುದರ ಸಾರಭಾಗವನ್ನು ಭುಂಜಿಸುತ್ತೇನೆ.

ವಿಪ್ರನಿಂದ ಪ್ರದತ್ತದ್ರವ್ಯವನ್ನು ಭಗವಂತ ಅಗ್ನಿಮುಖದಿಂದ ಸ್ವೀಕರಿಸುತ್ತಾನೆ. ಆದರೆ ಅಗ್ನಿ ಸಂಸ್ಕೃತವಾಗಿರಬೇಕು. **'ಸಂಸ್ಕೃತೇಽಗ್ನೌ ಜುಹುಯಾತ್"** ಸಂಸ್ಕಾರಗೊಂಡ ಅಗ್ನಿ ಸಂಸ್ಕೃತ. ಅಗ್ನಿಗೆ ನಡೆಸಬೇಕಾದ ಸಂಸ್ಕಾರಗಳೆಂದರೆ ಗರ್ಭಾಧಾನಾದಿ ಷೋಡಶ ಸಂಸ್ಕಾರಗಳು ಹಾಗೂ ವಿಷ್ಣ್ವಾಹುತಿಗಳು. **"ವಿಷ್ಣ್ವಾಹುತಿವಿಹೀನಂ ತು ಹೋಮಮಾಸುರ ಸಂಜ್ಞಕಮ್"** ಎಂಬ ಮಾತಿನಂತೆ ವಿಷ್ಣುಮಂತ್ರಗಳಿಂದ ಆಹುತಿ ನೀಡದೆ ನಡೆಯುವ ಯಾಗ ಆಸುರವೆನಿಸುತ್ತದೆ. ಅದಕ್ಕಾಗಿ ಕುಂಡ ಅಥವಾ ಸ್ಥಂಡಿಲದಲ್ಲಿ ಸ್ಥಾಪಿಸಿದ ಅಗ್ನಿಯಲ್ಲಿ ಷೋಡಶಸಂಸ್ಕಾರಗಳನ್ನು ವ್ಯಾಹೃತಿ ಮಂತ್ರದಿಂದ ನಡೆಸಿ, ನಾರಾಯಣಾಷ್ಟಾಕ್ಷರ, ಕೃಷ್ಣಷಡಕ್ಷರ, ವಾಸುದೇವ ದ್ವಾದಶಾಕ್ಷರ, ವಿಷ್ಣುಗಾಯತ್ರೀ, ಪುರುಷಸೂಕ್ತಗಳಿಂದ ಆಹುತಿಗಳನ್ನಿತ್ತು ಅಗ್ನಿಯನ್ನು ಸಂಸ್ಕೃತವಾಗಿಸಬೇಕು. ಈ ರೀತಿ ವೈಷ್ಣವ ಸಂಸ್ಕಾರಗಳಿಂದ ಸಂಸ್ಕೃತವಾದ ಅಗ್ನಿಯಲ್ಲಿ ಪ್ರಧಾನಾಹುತಿಗಳನ್ನು ನೀಡಬೇಕು.

## ಪಂಚಮುಖ ಆರಾಧನೆ

ಅಗ್ನಿಮುಖದ ಆರಾಧನೆಯಲ್ಲಿ ಐದು ತೆರನಾದ ಪ್ರಕ್ರಿಯೆಗಳಿರುತ್ತವೆ. ಅವೆಂದರೆ ಅಧ್ವರ, ಪೂಜಾ, ಜಪ, ಸ್ತೋತ್ರ ಹಾಗೂ ತರ್ಪಣ. ಈ

ಐದು ಬಗೆಯ ಆರಾಧನೆ ಒಟ್ಟಿಗೆ ನಡೆದಾಗ ಯಜ್ಞವು ಸಾಂಗವೆನಿಸುತ್ತದೆ. ಇವುಗಳಲ್ಲಿ ಪ್ರತಿಯೊಂದರ ಬಗೆಗೆ ಸಂಕ್ಷಿಪ್ತವಾಗಿ ತಿಳಿಯೋಣ.

**ಅಧ್ವರ :** ಅಗ್ನಿಯಲ್ಲಿ ಅಹುತಿ ನೀಡುವ ಹೋಮಪ್ರಕ್ರಿಯೆಯೇ ಅಧ್ವರ. ಇದು ಯಜ್ಞದ ಪ್ರಧಾನಭಾಗ. ಇದಕ್ಕೆ ಅಂಗಗಳಾಗಿ ಉಳಿದವು. ಈ ಅಧ್ವರದ ಸಾಂಗತೆಗಾಗಿಯೇ ಉಳಿದ ಪೂಜಾ, ಜಪ ಮೊದಲಾದ ವಿಧಿಗಳು ಅಪೇಕ್ಷಿತವಾಗಿದೆ.

ಔಪಾಸನ ವೈಶ್ವದೇವಾದಿ ನಿತ್ಯ ಯಜ್ಞಗಳನ್ನು ಮಣ್ಣಿನ ಅಥವಾ ತಾಮ್ರದ ತಟ್ಟೆಯಲ್ಲಿ ಅಗ್ನಿಯನ್ನು ಇಟ್ಟು ಅದರಲ್ಲಿ ನಡೆಸಬಹುದು. ಮಣ್ಣಿನ ಒಲೆಯಲ್ಲೂ ನಡೆಸಬಹುದಾಗಿದೆ. ಆದರೆ ಪವಮಾನಹೋಮ ಮೊದಲಾದ ನೈಮಿತ್ತಿಕ ಹವನಗಳನ್ನು ಒಲೆಯಲ್ಲಾಗಲೀ, ತಟ್ಟೆಯಲ್ಲಾಗಲೀ ಮಾಡುವಂತಿಲ್ಲ. ಸ್ಥಂಡಿಲ ಅಥವಾ ಕುಂಡಗಳೇ ಇಲ್ಲಿ ಅಪೇಕ್ಷಿತ. ಕಬ್ಬಿಣದ ಕುಂಡಾದಿಗಳಲ್ಲಿ ಹೋಮವು ಪ್ರಶಸ್ತವಲ್ಲ.

ಸ್ಥಂಡಿಲ ಅಥವಾ ಕುಂಡದಲ್ಲಿ ಹೋಮಗಳನ್ನು ನಡೆಸಬೇಕು. ನೆಲದಿಂದ ನಾಲ್ಕೈದು ಅಂಗುಲದಷ್ಟು ಎತ್ತರವಾಗುವಂತೆ ರಚಿಸಿದ ವೇದಿಕೆಗೆ ಸ್ಥಂಡಿಲವೆಂದು ಹೆಸರು. ಇದು ಚೌಕಾಕಾರದಲ್ಲೇ ಇರತಕ್ಕದ್ದು. ಇಟ್ಟಿಗೆ ಮರಳು ಮಣ್ಣುಗಳಿಂದ ಇದನ್ನು ರಚಿಸಬಹುದಾಗಿದೆ. ಮೂರು ಅಂತಸ್ತಿನಲ್ಲಿ ಇಟ್ಟಿಗೆಗಳನ್ನಿಟ್ಟು ಮಧ್ಯದಲ್ಲಿ ಗುಳಿಮಾಡಿ ರಚಿಸಿದರೆ ಅದು ಕುಂಡವೆನಿಸುತ್ತದೆ. ಈ ಸ್ಥಂಡಿಲ, ಕುಂಡಗಳಿಗೆ ಅದರದೇ ಅದ ವಾಸ್ತು ಲಕ್ಷಣಗಳನ್ನು ಶುಲ್ಬಸೂತ್ರಗಳು ವಿಸ್ತೃತವಾಗಿ ನಿರೂಪಿಸಿದೆ.

ಸ್ಥಂಡಿಲ–ಕುಂಡವೆಂಬುದು ಲಕ್ಷ್ಮೀಪ್ರತೀಕ. ಹರಿಣೀರೂಪಿಣಿ–ಯಾದ ಲಕ್ಷ್ಮೀದೇವಿಯನ್ನು ಕುಂಡದಲ್ಲಿ ಚಿಂತಿಸಿ, ಹರಿಣೀಪತಿ ಪರಶುರಾಮರೂಪೀ ದೇವನ ವೀರ್ಯಸ್ವರೂಪ ವಹ್ನಿಯನ್ನು ಧ್ಯಾನಿಸ ಬೇಕು. ಕುಂಡದಲ್ಲಿ ಅಗ್ನಿಪ್ರತಿಷ್ಠೆಯೆಂದರೆ ಅದು ವೀರ್ಯಾಧಾನ. ಅಲ್ಲಿ ಹುಟ್ಟಿದ ಜಾತವೇದಸ್ಸನ್ನು ಚಿಂತಿಸಿ ಸಂಜಾತಾಗ್ನಿಗೆ ವರದ, ಬಲ ವರ್ಧನ, ವಿಟಪ, ಸಮುದ್ಭವ,

ಮಂಗಲ ಮೊದಲಾದ ನಾಮಗಳಲ್ಲಿ ಸಂದರ್ಭೋಚಿತ -ಯೋಗೀ ನಾಮವನ್ನಿಟ್ಟು ವಿವಾಹಪರ್ಯಂತ ಸಂಸ್ಕಾರಗಳನ್ನು ನಡೆಸಬೇಕು. ಇದೀಗ ಈ ಅಗ್ನಿ ಸ್ವಾಹಾಪತಿ ಹವ್ಯವಾಹನ.

ಕುಂಡದಲ್ಲಿ ಸ್ಥಾಪಿಸಲ್ಪಟ್ಟ ವಹ್ನಿ ಬರಿಯ ಬೆಂಕಿಯಲ್ಲ. ಪ್ರಕೃತಿ ಪುರುಷ ಸಮಾಗಮದಿಂದ ಆವಿರ್ಭವಿಸಿದ ಯಜ್ಞಾಗ್ನಿ. ಪ್ರಕೃತಿ ಪುರುಷ ಸಮಾಗಮದಿಂದ ಇಡಿಯ ವಿಶ್ವ ಸೃಷ್ಟವಾಗಿದೆ. ತತ್ವಜ್ಞ ಪುರೋಹಿತನೊಬ್ಬ ಹೋಮಕುಂಡದಲ್ಲಿ ಬ್ರಹ್ಮಾಂಡವನ್ನು ಅನುಸಂಧಾನಿಸುತ್ತಾನೆ. ಕುಂಡದ ಮೂರು ಮೇಖಲೆ(ಮೆಟ್ಟಿಲು)ಗಳು ಸೃಷ್ಟಿಕಾರಣಗಳಾದ ಸತ್ವ-ರಜಸ್ಸು-ತಮಸ್ಸುಗಳಾಗುತ್ತವೆ. ನಾಭಿಕಂಠಗಳು ಮಹದಹಂಕಾರ ತತ್ವಗಳೆನಿಸಿವೆ. ಈ ಅನುಸಂಧಾನದೊಡನೆ ಆತ ಯಜ್ಞಾಗ್ನಿಯ ಮೂಲಕ ಅಪೇಕ್ಷಿತ ಫಲವನ್ನು ಸೃಜಿಸಬಲ್ಲ. ಯಾಜ-ಉಪಯಾಜರಂತೆ, ಅಥವಾ ಋಷ್ಯಶೃಂಗನಂತೆ.

**ಪೂಜಾ :** ಯಜ್ಞಾಗ್ನಿಯ ದಕ್ಷಿಣದಲ್ಲಿ ಚಕ್ರಾಬ್ಜಾದಿ ಮಂಡಲ ಬರೆದು ಅದರಲ್ಲಿ ಸ್ವಸ್ತಿಕೆ ಶಾಲಗ್ರಾಮಾದಿಗಳನ್ನಿಟ್ಟು ಪೂಜಿಸಬೇಕು. ಇಲ್ಲಿ ಧ್ಯಾನ-ಆವಾಹನ-ಆಸನ ಮೊದಲಾದ ಉಪಚಾರ ಪೂಜೆ ನಡೆಯುತ್ತದೆ.

**ಜಪ :** ಯಜ್ಞಾಗ್ನಿಯ ಈಶಾನ್ಯಭಾಗದಲ್ಲಿ ಭದ್ರಕಾದಿ ಮಂಡಲದ ಮೇಲೆ ಕಲಶವನ್ನಿಟ್ಟು ಜಲ-ದ್ರವ್ಯಗಳನ್ನು ತುಂಬಿಸಿ ಪೂಜಿಸಿ ಅದರ ಸ್ಪರ್ಶದೊಡನೆ ಹೋಮ ಪ್ರಧಾನ ಮಂತ್ರಗಳನ್ನು ಜಪಿಸುವುದು. ಹೀಗೆ ಜಪದಿಂದ ಅಭಿಮಂತ್ರಿತಜಲವನ್ನು ಯಜ್ಞಾಂತ್ಯದಲ್ಲಿ ಯಜಮಾನ ವರ್ಗಕ್ಕೆ ಅಭಿಷೇಕ ಮಾಡುವುದರ ಮೂಲಕ ದ್ರವ್ಯ ಹಾಗೂ ಮಂತ್ರದ ಸತ್ವವನ್ನು ಯಜಮಾನನಿಗೆ ವರ್ಗಾಯಿಸಲಾಗುತ್ತದೆ.

**ಸ್ತೋತ್ರ :** ಯಜ್ಞಾಗ್ನಿಯ ಆಗ್ನೇಯದಲ್ಲಿ ಕುಳಿತು ವಿಷ್ಣುಸಹಸ್ರ ನಾಮ, ಬೃಹತೀ ಸಹಸ್ರ, ರುದ್ರಾಧ್ಯಾಯ ಮುಂತಾದ ಸ್ತೋತ್ರಗಳಿಂದ ಪ್ರಧಾನ ದೇವತೆಯ ಗುಣಗಾನವನ್ನು ಮಾಡುವುದು ಸ್ತೋತ್ರವೆನಿಸುತ್ತದೆ.

**ತರ್ಪಣ :** ಯಜ್ಞಾಗ್ನಿಯ ವಾಯವ್ಯದಲ್ಲಿ ಕುಳಿತು ಕ್ಷೀರ, ನೀರ, ನಾರಿಕೇಲಜಲ ಮೊದಲಾದ ದ್ರವ್ಯದಿಂದ ಪ್ರಧಾನ ದೇವತಾ ಮಂತ್ರವನ್ನು ಉಚ್ಚರಿಸುತ್ತಾ ಆಹುತಿಗೊಂದರಂತೆ ತರ್ಪಣವನ್ನೀಯುವುದು. ಅಂದರೆ ದೇವಪ್ರತೀಕವೆನಿಸುವ ಚತುರ್ದರ್ಭರ್ಕೂರ್ಚವನ್ನೂ ಹಿರಣ್ಯವನ್ನೂ ಬಲಕೈಯಲ್ಲಿ ಹಿಡಿದು ಕ್ಷೀರಾದಿ ದ್ರವ್ಯವನ್ನು ಹಾಕುತ್ತಾ ಮಂತ್ರೋಚ್ಚಾರಣೆ ಯೊಡನೆ 'ತರ್ಪಯಾಮಿ' ಎನ್ನುವುದು.

ತರ್ಪಣವನ್ನು ಮೂರು ಬಗೆಯಲ್ಲಿ ಕೊಡಬಹುದು. ಮೊದಲನೆಯ ದಾಗಿ ಅಭಿಷೇಕರೂಪವಾದ ತರ್ಪಣ. ಅಂದರೆ ಪವಮಾನಹೋಮಾದಿ ಗಳಲ್ಲಿ ಆ ಮಂತ್ರವನ್ನು ಉಚ್ಚರಿಸುತ್ತಾ ಶಾಲಗ್ರಾಮ ಇಲ್ಲವೇ ವಿಷ್ಣು ಪ್ರತಿಮೆಗೆ ಮಧು-ಕ್ಷೀರಾದಿಗಳನ್ನು ಹಾಕುತ್ತಾ ತರ್ಪಣವನ್ನೀಯುವುದು. ಇಲ್ಲಿ ಮಧ್ವಾದ್ಯಭಿಷೇಕವೇ ತರ್ಪಣ. ಎರಡನೆಯದು ಅಂಜಲಿ ತರ್ಪಣ. ಯಜ್ಞಾಗ್ನಿಯ ವಾಯವ್ಯದಲ್ಲಿ ಅಷ್ಟದಲಪದ್ಮ ಬರೆದು ಅದರಲ್ಲಿ ಕಂಚು ಮುಂತಾದ ಲೋಹದ ಅಗಲಬಾಯಿಯ ಪಾತ್ರೆಯನ್ನಿಟ್ಟು ಹಾಲು, ನಾರಿಕೇಲಜಲ ಮುಂತಾದ ದ್ರವ್ಯದಿಂದ ತುಂಬಿಸಬೇಕು. ಅದರಲ್ಲಿ ಕ್ಷೀರಸಾಗರ (ವರುಣ)ನನ್ನು ಆವಾಹಿಸಿ ಬೊಗಸೆಯಲ್ಲಿ ಫಲಕೂರ್ಚ ಗಳೊಂದಿಗೆ ಸಾಗರದಲ್ಲಿ ತರ್ಪಣವಿತ್ತಂತೆ ಎತ್ತಿ ಅದರಲ್ಲೇ ತರ್ಪಣ ವನ್ನೀಯುವುದು. ಕೊನೆಯದಾಗಿ ಸಾಮಾನ್ಯತರ್ಪಣ. ಕೈಯಲ್ಲಿ ಕೂರ್ಚಹಿಡಿದು ಶುದ್ಧೋದಕದಿಂದ ಬೆರಳತುದಿಯಿಂದ ತರ್ಪಣ ವನ್ನೀಯುವುದು.

ಈ ಐದು ಮುಖದ ಆರಾಧನೆ ನಡೆದಾಗ ಯಜ್ಞವು ಬೃಂಹಿತವಾಗಿ ಪೂರ್ಣವಾಗುತ್ತದೆ. ಆರಾಧಿತ ದೇವ ಚಿಂತಿತಪ್ರದನಾಗುತ್ತಾನೆ.

**ಪೂಜಾಧ್ವರ ಜಪಸ್ತೋತ್ರ ತರ್ಪಣಾದಿಭಿರಂಚಿತಃ ।**
**ಚಿಂತಾಮಣಿರ್ವಿಘ್ನಹರಃ ಸರ್ವಾಭೀಷ್ಟಾರ್ಥದೋಽನಿಶಮ್ ॥**

ಈ ಐದು ಪ್ರಕ್ರಿಯೆ ಉಪನಯನ ವಿವಾಹಾದಿ ಗೃಹ್ಯೋಕ್ತ ಹೋಮ ಕರ್ಮಗಳನ್ನು ಹೊರತು ಪಡಿಸಿ ಉಳಿದೆಲ್ಲಾ ಹೋಮಗಳಲ್ಲೂ ಸಮಾನ.

## ಸ್ಥಂಡಿಲ ಸಂಸ್ಕಾರ – ಅಗ್ನಿಪ್ರತಿಷ್ಠೆ

ಅಗ್ನಿಪ್ರತಿಷ್ಠೆಗಾಗಿ ನಿರ್ಮಿಸಿದ ವೇದಿಕೆಯೇ ಸ್ಥಂಡಿಲ. ಪೂರ್ವಾಭಿಮುಖವಾಗಿ ಕುಳಿತು ಹೋಮಿಸುವುದಕ್ಕೆ ಅನುಗುಣವಾಗುವಂತೆ ಚಚ್ಚೌಕಾಕೃತಿಯಲ್ಲಿ ಸ್ಥಂಡಿಲವನ್ನು ನಿರ್ಮಿಸಲಾಗುತ್ತದೆ. ಈ ಸ್ಥಂಡಿಲವನ್ನು ರಂಗೋಲಿಯಿಂದ ಅಲಂಕರಿಸಲಾಗುತ್ತದೆ.

ಸ್ಥಂಡಿಲದ ಸುತ್ತ ಬರೆಯುವ ರಂಗೋಲಿಯ ಚಿತ್ರ ಹೇಗಿರಬೇಕೆಂಬ ಬಗ್ಗೆ ಪ್ರಾಚೀನ ಗ್ರಂಥಗಳು ನಿಯತಕ್ರಮವನ್ನು ಹೇಳಿದಂತಿಲ್ಲ. ಹಾಗಿದ್ದರೂ ಸ್ಥಂಡಿಲವನ್ನು ಅಲಂಕರಿಸುವಲ್ಲಿ ಪ್ರಾದೇಶಿಕವಾದ ಕೆಲವು ನಡಾವಳಿಗಳಿವೆ. ಉಡುಪಿ, ಕೇರಳ ಪರಿಸರದಲ್ಲಿಯ ಸಂಪ್ರದಾಯ ಹೀಗೆ – ಸ್ಥಂಡಿಲದ ನಾಲ್ಕೂ ಬದಿಯಲ್ಲಿ ಎರಡೆರಡು (ಯಾಜುಷ ಪದ್ಧತಿಯಲ್ಲಿ ಮೂರು ಮೂರು) ರೇಖೆಗಳನ್ನು ಎಳೆದು, ನಾಲ್ಕು ದಿಗ್ಭಾಗದಲ್ಲಿ ಅಶ್ವತ್ಥದಲದಂತಹ ಆಕೃತಿಯನ್ನೂ, ವಿದಿಕ್ಕುಗಳಲ್ಲಿ ಅಷ್ಟದಲಪದ್ಮಾಕಾರವನ್ನೂ ಬರೆಯಲಾಗುತ್ತದೆ. ಅಶ್ವತ್ಥದಲಗಳನ್ನು ಪರಸ್ಪರ ಸ್ಪರ್ಶಿಸುವಂತೆ ಜೋಡಿ ರೇಖೆಗಳನ್ನೆಳೆದು ಸ್ಥಂಡಿಲದ ಮೇಲೆ ಹಾದು ಹೋಗುವಂತೆ ಚಚ್ಚೌಕಾಕೃತಿಯನ್ನು ರಚಿಸಲಾಗುತ್ತದೆ. ಈ ಮಂಡಲವನ್ನು ಅರಿಶಿನ ಕುಂಕುಮಗಳಿಂದ ಅಲಂಕರಿಸಿದಾಗ ಸ್ಥಂಡಿಲಾಲಂಕಾರ ಸಂಪನ್ನವೆನಿಸುತ್ತದೆ.

ಬೇರೆಡೆಯ ಸಂಪ್ರದಾಯದಲ್ಲಿ ಇಂಥದೇ ಮಂಡಲವೆಂಬ ನಿಯಮವಿಲ್ಲದಿದ್ದರೂ ರಂಗೋಲಿಯಿಂದ ಅಲಂಕರಿಸುವ ಪದ್ಧತಿಯಿದೆ.

ಹೀಗೆ ನಿರ್ಮಿಸಿದ ಸ್ಥಂಡಿಲದ ಮಧ್ಯದಲ್ಲಿ ಆರುರೇಖೆಗಳನ್ನು ಬರೆಯಬೇಕು. ಆ ರೇಖೆಗಳಲ್ಲಿ ತ್ರಿಮೂರ್ತಿಗಳನ್ನೂ ಅವರ ಪತ್ನಿಯರನ್ನೂ ಆವಾಹಿಸಬೇಕು. ಅಡ್ಡಲಾಗಿ ಬರೆದ ಉದ್ದದ ರೇಖೆಯಲ್ಲಿ ಬ್ರಹ್ಮನನ್ನೂ ನೀಳವಾಗಿ ಬರೆದ ಐದು ರೇಖೆಗಳಲ್ಲಿ ಬಲಭಾಗದ ರೇಖೆಯಲ್ಲಿ ವಿಷ್ಣುವನ್ನೂ, ಎಡಭಾಗದ ರೇಖೆಯಲ್ಲಿ ರುದ್ರನನ್ನೂ ಮಧ್ಯದ ಮೂರು

ರೇಖೆಗಳಲ್ಲಿ ಕ್ರಮವಾಗಿ ಬಲದಿಂದ ಎಡಕ್ಕೆ ಉಮಾ, ಲಕ್ಷ್ಮೀ, ಸರಸ್ವತಿಯರನ್ನೂ ಆವಾಹಿಸಬೇಕು. ಹೀಗೆ –

**ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ಉಮಾ ಲಕ್ಷ್ಮೀ ಸರಸ್ವತೀ ।**
**ಷಡ್ರೇಖಾದೇವತಾಃ ಪ್ರೋಕ್ತಾಃ ಸ್ಥಂಡಿಲೋಲ್ಲೇಖನ ಕ್ರಮಾತ್ ॥**

ಸಾಮಾನ್ಯವಾಗಿ ಹೋಮಗಳಲ್ಲಿ ಇಲ್ಲಿಗೆ ಸ್ಥಂಡಿಲ ಸಂಸ್ಕಾರವು ಮುಗಿಯುವುದು. ಅಲ್ಲಿ ಅಗ್ನಿಪ್ರತಿಷ್ಠೆ ಮಾಡಬಹುದಾಗಿದೆ. ಆದರೆ ಮಹಾ ಹೋಮಗಳಲ್ಲಿ ಯಂತ್ರಪೂಜೆಯೆಂಬ ವಿಧಿಯಿದೆ.

ಸ್ಥಂಡಿಲದಲ್ಲಿ ಆಯಾ ಹೋಮಗಳಿಗೆ ವಿಹಿತವಾದ ಯಂತ್ರವನ್ನೂ, ಅಕ್ಷರಗಳನ್ನೂ ಬರೆಯಬೇಕು. ಅದರಲ್ಲಿ ಮಾತೃಕಾ ದೇವತೆಗಳನ್ನು ಆವಾಹಿಸಿ ಪೂಜಿಸಬೇಕು.

ಅ ಕಾರದಿಂದ ಆರಂಭಿಸಿ, ಕ್ಷ ಕಾರದ ತನಕ ಒಟ್ಟು ಅಕ್ಷರಗಳು 51. ಇವಕ್ಕೆ ಮಾತೃಕೆಗಳೆಂದು ಹೆಸರು. ಈ ಮಾತೃಕೆಗಳಿಗೆ ಸಂಬಂಧ ಪಟ್ಟ ಭಗವಂತನ 51ರೂಪಗಳಿವೆ. ಅಜ, ಆನಂದ ಮೊದಲಾದವು. ಈ ರೂಪಗಳನ್ನು ಲಿಖಿತ ಯಂತ್ರದಲ್ಲಿ ಆವಾಹಿಸಿ, ಶಾಲಗ್ರಾಮಾದಿಗಳನ್ನೂ ಅಲ್ಲಿಟ್ಟು, ಲಕ್ಷ್ಮೀನಾರಾಯಣರನ್ನು ವಿಧಿಪ್ರಕಾರ ಪೂಜಿಸಿ, ಅಲ್ಲಿ ಲಕ್ಷ್ಮೀದೇವಿಯಲ್ಲಿ ಅಗ್ನ್ಯುತ್ಪತ್ತಿಯನ್ನು ಧ್ಯಾನಿಸುತ್ತಾ, ಅಗ್ನಿಪ್ರತಿಷ್ಠೆಯನ್ನು ಮಾಡಬೇಕು.

ಯಂತ್ರಪೂಜೆಯಾದೊಡನೆ ಷಡ್ರೇಖೆಯನ್ನು ಬರೆದು ಅಗ್ನಿಯನ್ನು ಸ್ಥಂಡಿಲದಲ್ಲಿ ಸ್ಥಾಪಿಸಲಾಗುತ್ತದೆ. ಅಗ್ನಿಯನ್ನು ಲಕ್ಷಣಸಂಪನ್ನೆಯರಾದ ಲಕ್ಷ್ಮೀಸ್ವರೂಪಿಣಿ ಮುತ್ತೈದೆಯರು ತರುತ್ತಾರೆ.

## ಅಗ್ನಿಯನ್ನು ಎಲ್ಲಿಂದ ತರಬೇಕು?

ಅಗ್ನಿಯು ಎಂದೆಂದೂ ಶುದ್ಧ. ಅಗ್ನಿಗೆ ಹುಟ್ಟಿನಿಂದಾಗಲೀ, ದೇಶ ಭೇದದಿಂದಾದಗಲೀ ಪರಸ್ಪರ್ಶದಿಂದಾಗಲೀ ಅಶುಚಿಯಿಲ್ಲ. ಹಾಗಿದ್ದರೂ ಯಜ್ಞಾಗ್ನಿಯನ್ನು ಎಲ್ಲಿಂದ ತರಬೇಕು ಎಂಬ ಬಗ್ಗೆ ವಿಧಿನಿಷೇಧಗಳಿವೆ.

ಯಜ್ಞಕ್ಕೆ ಅರಣಿಮಥಿತಾಗ್ನಿ ಅತ್ಯುತ್ತಮ. ಶ್ರೋತ್ರಿಯಾಗ್ನಿ ಉತ್ತಮ. ಸ್ವಗೃಹಾಗ್ನಿ ಮಧ್ಯಮ. ಸ್ಮಶಾನ ಮೊದಲಾದ ಅಶುಭ ಪ್ರದೇಶದ ಅಗ್ನಿ ಮಾಂಸ ಬೇಯಿಸುವ ಅಗ್ನಿ ಹಾಗೂ ಹೆಚ್ಚು ಹೊಗೆಯಾಡುವ (ಅಂಥ ಇಂಧನವುಳ್ಳ) ಅಗ್ನಿ ನಿಷಿದ್ಧ.

ಖದಿರ ಹಾಗೂ ಅಶ್ವತ್ಥ ವೃಕ್ಷದ ಎರಡು ಕಟ್ಟಿಗೆಗಳಿಗೆ ಅರಣಿಯೆಂದು ಹೆಸರು. ಅವನ್ನು ಹಗ್ಗ ಹಾಕಿ ಮಥನ ಮಾಡಿ ಪರಸ್ಪರ ಘರ್ಷಿಸುವುದರಿಂದ ಅಗ್ನಿಯು ಉತ್ಪತ್ತಿಯಾಗುತ್ತದೆ. ಈ ರೀತಿ ಜನಿಸಿದ ಅಗ್ನಿಗೆ ಅರಣಿ ಮಥಿತಾಗ್ನಿಯೆಂದು ಹೆಸರು.

ಅರಣಿಮಥನವು ಕಷ್ಟದ ಕೆಲಸ. ಅದಕ್ಕೆ ದಿನ ಶುದ್ಧವಿರಬೇಕು. ಜ್ಯೋತಿರ್ಲಕ್ಕಕ್ಕೆ ಅನುಗುಣವಾಗಿ ಅಗ್ನಿ ಸ್ವರ್ಗ ಪಾತಾಳಗಳಲ್ಲಿರದೆ ಭೂಮಿಯಲ್ಲಿರಬೇಕು. ಯಜಮಾನ ಪತ್ನಿ ಹಾಗೂ ಯಜಮಾನ ಸೇರಿ ಅರಣಿಮಂಥನ ನಡೆಸುತ್ತಾರೆ. ಅಲ್ಲಿ ಉತ್ಪನ್ನವಾದ ಅಗ್ನಿಯನ್ನು ತೆಂಗಿನ ನಾರು ಮೊದಲಾದ ಇಂಧನಗಳಿಂದ ವೃದ್ಧಿಗೊಳಿಸಿ, ಯಜ್ಞಕ್ಕಾಗಿ ಸಂರಕ್ಷಿಸಲಾಗುತ್ತದೆ.

ಅರಣಿಮಂಥನವು ಅಶಕ್ಯವಾದಾಗ ಶ್ರೋತ್ರಿಯಾಗ್ನಿಯನ್ನು ಉಪಯೋಗಿಸಬಹುದು. ಶ್ರೋತ್ರಿಯನ ಮನೆಯ ಅಗ್ನಿ ಅರಣಿಮಂಥಿ-ತಾಗ್ನಿಗೆ ಸದೃಶ. ಶ್ರೋತ್ರಿಯನೆಂದರೆ ವೇದಾಧ್ಯಯನವನ್ನು ಮುಗಿಸಿ, ಅಧ್ಯಾಪನದಲ್ಲಿ ನಿರತನಾದ ಶ್ರೌತಾಚಾರನಿಷ್ಠ ಬ್ರಾಹ್ಮಣ.

**ಜನ್ಮನಾ ಜಾಯತೇ ಜಂತುಃ ಸಂಸ್ಕಾರೈಃ ದ್ವಿಜ ಉಚ್ಯತೇ ।**
**ವೇದಾಭ್ಯಾಸೇನ ವಿಪ್ರತ್ವಂ ತ್ರಿಭಿಃ ಶ್ರೋತ್ರಿಯ ಉಚ್ಯತೇ ॥**

ಜನನವುಳ್ಳದ್ದಕ್ಕೆ ಜಂತುವೆಂದು ಹೆಸರು. ಹುಟ್ಟಿನಿಂದ ಯಾರೂ ಶ್ರೋತ್ರಿಯನಲ್ಲ. ಹುಟ್ಟಿದುದು ಜಂತು ಅಷ್ಟೇ. ಉಪನಯನಾನಂತರ ಸಂಸ್ಕಾರಗಳಿಂದ ಮರುಹುಟ್ಟು ಪಡೆದ ಆತ ದ್ವಿಜನೆನಿಸಿಕೊಳ್ಳುತ್ತಾನೆ. ಮುಂದೆ ವೇದಾಧ್ಯಯನದಿಂದ ವಿಶೇಷವಾಗಿ ಜ್ಞಾನದಿಂದ ತುಂಬಿ 'ವಿಪ್ರ'

(ವಿಶೇಷೇಣ ಪೂರಣಾತ್ ವಿಪ್ರಃ) ಎಂದೆನಿಸುತ್ತಾನೆ. ಮೂರೂ ವೇದಗಳನ್ನು ತುಂಬಿಸಿಕೊಂಡು ಅಗ್ನಿಹೋತ್ರಾದಿಗಳನ್ನು ಮಾಡಿಕೊಂಡಿ ರುವ ವ್ಯಕ್ತಿ ಶ್ರೋತ್ರಿಯನೆನಿಸಿದ್ದಾನೆ.

ಶ್ರೋತ್ರಿಯ ಅಗ್ನಿಹೋತ್ರದ ಅಗ್ನಿಯನ್ನು ವಿವಾಹಾಗ್ನಿಯಿಂದ ಅರಂಭಿಸಿ, ರಕ್ಷಿಸಿಕೊಂಡು ಬಂದಿರುತ್ತಾನೆ. ಅವನ ಮನೆಯಲ್ಲಿ ಶ್ರೋತ್ರಿಯ ಪತ್ನಿಯಲ್ಲಿ ಬೇಡಿ ತಂದ ಅಗ್ನಿಯೂ ಉತ್ತಮಕಲ್ಪದ್ದೇ. ಅದೂ ಅಲಭ್ಯ ವಾದಾಗ ತನ್ನ ಮನೆಯ ಅಗ್ನಿಯನ್ನೇ ಉಪಯೋಗಿಸಬಹುದು.

**"ಶ್ರೋತ್ರಿಯಾಗಾರಾತ್ ಸ್ವಗೃಹಾದ್ವಾ ಪ್ರದೀಪ್ತಂ ಬಹುಳಾಂಗಾರಸಮೃದ್ಧಂ ನಿರ್ಧೂಮಮಗ್ನಿಂ"**

ಅಗ್ನಿಯನ್ನು ತರಲು ಮಣ್ಣಿನ ಪಾತ್ರೆ ವಿಹಿತವಾಗಿದೆ. ಚಿನ್ನ,ಬೆಳ್ಳಿ, ತಾಮ್ರ,ಕಂಚು ಪಾತ್ರೆಗಳೂ ಉಚಿತ. ಕಬ್ಬಿಣದ ಪಾತ್ರೆ ನಿಷೇಧಿಸಲ್ಪಟ್ಟಿದೆ. ಎರಡು ಪಾತ್ರೆಗಳು ಬೇಕು. ಒಂದು ತಟ್ಟೆಯಲ್ಲಿ ಜ್ವಲಿಸುವ ಧೂಮರಹಿತ ಕೆಂಡವನ್ನಿಟ್ಟು ಮತ್ತೊಂದರಿಂದ ಅದನ್ನು ಆಚ್ಛಾದಿಸಿ ಹಿಡಿದು ಅಗ್ನಿಯನ್ನು ಸುವಾಸಿನಿಯರು ತರುತ್ತಾರೆ.

ಸ್ಥಂಡಿಲದಲ್ಲಿ ಅಗ್ನಿಯ ದಿಕ್ಕೆನಿಸಿದ ಆಗ್ನೇಯದಲ್ಲಿ ಆ ಅಗ್ನಿ ಪಾತ್ರೆಯನ್ನು ಇರಿಸುತ್ತಾರೆ. ಪೂಜಿಸಿ, ನಮಿಸುತ್ತಾರೆ.

ಯಜಮಾನನು ಅಗ್ನಿಯಲ್ಲಿನ ಕ್ರವ್ಯಾದ ಭಾಗವನ್ನು ನೈರ್ಋತ್ಯ ದಿಕ್ಕಿನೆಡೆ ಬಿಸುಟು, ಅಗ್ನಿಯನ್ನು ಷಡ್ರೇಖೆಯ ಮೇಲೆ ಪ್ರತಿಷ್ಠಾಪಿಸುತ್ತಾನೆ. ಅಗ್ನಿಯನ್ನು ತಂದ ಸ್ತ್ರೀಯರಿಗೆ **"ಅಗ್ನಿ ಮರ್ಯಾದೆ"** ಎಂಬ ಸ್ವರೂಪದ ತಾಂಬೂಲಾದಿಗಳನ್ನು ಪತ್ನಿಯ ಮೂಲಕ ಕೊಡಿಸುತ್ತಾನೆ.

ಯಾವುದೇ ಅಗ್ನಿಯಲ್ಲಿ 'ಕ್ರವ್ಯಾದ' ಎಂಬ ಭಾಗವಿದೆ. ಕ್ರವ್ಯವೆಂದರೆ ಮಾಂಸ. ಅದನವೆಂದರೆ ಉಣ್ಣುವುದು. ಕ್ರವ್ಯವನ್ನು ಉಣ್ಣುವವ ಕ್ರವ್ಯಾದ. ಚಿತೆಯಲ್ಲಿದ್ದ ಹವ್ಯವನ್ನು ಸ್ವೀಕರಿಸುವವ ಕ್ರವ್ಯಾದ. ಅಂತ್ಯೇಷ್ಟಿಯಲ್ಲಿ

ಪಾರ್ಥಿವಶರೀರವೆಂಬ ಕ್ರವ್ಯವನ್ನು ಸ್ವೀಕರಿಸುವ ಈ ಕ್ರವ್ಯಾದನಿಗೆ ಕ್ರವ್ಯರಹಿತವಾದ ನಮ್ಮ ಯಾಗಗಳಲ್ಲಿ ಸ್ಥಾನವಿಲ್ಲ. ಅದಕ್ಕಾಗಿ ರಕ್ಷೋಭಯಂಕರನಾದ ಸುದರ್ಶನನನ್ನು ಸ್ಮರಿಸುತ್ತಾ ಸುದರ್ಶನಾಸ್ತ್ರ ಮಂತ್ರದಿಂದ ಕ್ರವ್ಯಾದಾಗ್ನಿಯನ್ನು ದರ್ಭೆಯಲ್ಲಿ ಹಚ್ಚಿ ರಕ್ಷೋನಾಯಕನಾದ ನಿರ್ಋತಿಯ ದಿಕ್ಕಿನಲ್ಲಿ ಬಿಸುಟು ಕೈತೊಳೆದುಕೊಳ್ಳಬೇಕು. ಕ್ರವ್ಯಾದನಿರಸನವಾದ ಮೇಲೆಯೇ ಅಗ್ನಿಯು ಪ್ರತಿಷ್ಠಾಪನೆಗೆ ಅರ್ಹವಾಗುತ್ತದೆ.

* * *

# ಗಣಹೋಮ

ತಾರತಮ್ಯದ ನಿಚ್ಚಣಿಕೆಯಲ್ಲಿ ಗಣಪತಿಗಿಂತ ಮೇಲಿನ ಬ್ರಹ್ಮ ರುದ್ರಾದಿ ಅನೇಕ ದೇವತೆಗಳಿದ್ದಾರೆ. ಕೆಳಗಿನ ಕಕ್ಷೆಯಲ್ಲೂ ಪರ್ಜನ್ಯ, ಗಂಗೆ, ಶನಿ ಮೊದಲಾದವರಿದ್ದಾರೆ. ಆದರೂ ಹದಿನೆಂಟನೇ ಕಕ್ಷೆಯ ಗಣಪತಿಗೇ ಮೊದಲಪೂಜೆ.

'ಇದೇಕೆ ಹೀಗೆ'? ಇದು ಆರೋಹಣಕ್ರಮವೂ ಅಲ್ಲ! ಅವರೋಹಣ ಕ್ರಮವೂ ಅಲ್ಲ!! 'ಆದಿಯೊಳು ಪೂಜಿಪುದು ಗಣನಾಥನ, ಹರಿಯಾಜ್ಞೆ ಇದಕುಂಟು' ಎಂದಿದ್ದಾರೆ ದಾಸವರ್ಯರು.

ಹೀಗೊಂದು ಉತ್ತರ, ದೇವತಾ ತಾರತಮ್ಯ 32 ಕಕ್ಷೆಯಲ್ಲಿ ವಿಂಗಡಿಸಲ್ಪಟ್ಟಿದೆಯಷ್ಟೇ. ಇದರಲ್ಲಿ ಮೊದಲ ಹದಿನೆಂಟು ಕಕ್ಷೆಯ ದೇವತೆಗಳು ಈಗಾಗಲೇ ತುಂಬಿದ ಜ್ಞಾನದ ಬಲದಿಂದ ಭಗವಂತನಲ್ಲಿ ಭಕ್ತಿಮಾಡುವ ಭಕ್ತಿಯೋಗಿಗಳು. ನಂತರದ 19ನೇ ಕಕ್ಷೆಯಿಂದ 29ನೇ ಕಕ್ಷೆಯ ತನಕದವರು ಜ್ಞಾನಸಾಧನೆಯಲ್ಲಿ ತೊಡಗಿರುವ ಜ್ಞಾನಯೋಗಿ ಗಳು. ಭಕ್ತಿಯೋಗಿಗಳ ಕಕ್ಷೆ ಗಣಪತಿಯಿಂದ ಆರಂಭಗೊಂಡಿದೆ. ಆರೋಹಣ ಗತಿಯಲ್ಲಿ ಚತುರ್ಮುಖನಲ್ಲಿ ಕೊನೆಗೊಂಡಿದೆ.

'ಭಗವದನುಗ್ರಹಕ್ಕೆ ಭಕ್ತಿಯೇ ಮುಖ್ಯಸಾಧನ. 18ನೆಯ ಕಕ್ಷೆಯಲ್ಲಿನ ಗಣಪತಿಯಿಂದಲೇ ಭಕ್ತಿಯ ಮೊದಲಪಾಕ ನಡೆಯಬೇಕು. ಆದ್ದರಿಂದಲೆ ಅವನಿಗೆ ಮೊದಲಪೂಜೆ ಸಲ್ಲಿಸಿ ಅವನ ಅನುಗ್ರಹದಿಂದ ಸಾಧನೆಯ

ಮಾರ್ಗದಲ್ಲಿ ಒದಗಬಹುದಾದ ವಿಘ್ನಗಳನ್ನು ಕಳೆದುಕೊಂಡು ಮುನ್ನಡೆಯಬೇಕು.

ಗಣಗಳಿಗೆ ಪತಿ ಗಣಪತಿ. ಈತನ ಆಧಿಪತ್ಯಕ್ಕೆ ಒಳಪಟ್ಟ ಗಣವೆಂದರೆ ವಿಘ್ನದೇವತೆಗಳ ಗಣ. ವಿಘ್ನಪತಿಯಾದ ಈತ ವಿಶ್ವಂಭರನನ್ನು ಆರಾಧಿಸಿದ. ವಿಷ್ಣುವಿನ ಗಜಮುಖದ ರೂಪವೆನಿಸಿದ ವಿಶ್ವಂಭರರೂಪ ವನ್ನು ಮನಃಪೂರ್ತಿ ತುಂಬಿಕೊಂಡು ಧ್ಯಾನಿಸಿದ ಕಾರಣದಿಂದಲೆ ಸಾರೂಪ್ಯವನ್ನು ಪಡೆದು ಈತ ಗಜಮುಖನಾದ. "ವಿನಾಯಕೋಽಪಿ ವಿಶ್ವಸ್ಯ ಧ್ಯಾನಾದ್ಯೈತ್ ಗಜವಕ್ತ್ರತಾಂ" (ಮಾಂ.ಉ.ಭಾಷ್ಯ1-4). ಶಿವ ಪಾರ್ವತೀ ತನೂಜನಾದ ಗಜಮುಖನ ಅಂತರ್ಯಾಮಿಯಾಗಿ ಚಿಂತಿಸಲ್ಪಡುವ ದೇವ ವಿಶ್ವಂಭರ.

ಗಣಪತಿಗೆ ತಾಮಸಪದ್ಧತಿಯ ಪೂಜೆಯಿದೆ. ರಾಜಸಪೂಜೆಯಿದೆ. ಸಾತ್ವಿಕಪೂಜೆಯೂ ಇದೆ. ಎಲ್ಲವು ಕ್ಷಿಪ್ರಫಲದಾಯಕ. ಆದ್ದರಿಂದಲೇ ಈತ ಕ್ಷಿಪ್ರಪ್ರಸಾದ. "ಕಾಮದಸ್ತ್ವರಯಾ ಹ್ಯಯಮ್" ಎಂದಿದ್ದಾರೆ ಆಚಾರ್ಯಮಧ್ವರು. 'ಲಘುಬಗೆಲಿ ಫಲವೀವ ದೇವ ಗಣಪ'.

ತಾಮಸ ರಾಜಸ ಪೂಜೆಗಳು ಐಹಿಕಫಲವನ್ನು ಮಾತ್ರ ನೀಡುತ್ತದೆ. ಪಾರತ್ರಿಕ ಸಾಧನೆಯಲ್ಲಿ ಕಂಟಕಗಳಾಗಿ ನಿಲ್ಲುತ್ತವೆ. ಸಾತ್ವಿಕ ಪೂಜೆಯೇ ಗ್ರಾಹ್ಯ.

ಗಣಪತಿಯು ಒಳಗಿರುವ ವಿಶ್ವಂಭರನನ್ನು ಮರೆತು ಬರಿಯ ಗಣಪತಿಯನ್ನು ಪೂಜಿಸುವುದು ತಾಮಸಪೂಜೆ. ಅವನ ನೈವೇದ್ಯ ಅನ್ಯನೈವೇದ್ಯವೆನಿಸಿ ಸಾಧಕನಿಗೆ ಅಗ್ರಾಹ್ಯವೆನಿಸಿಬಿಡುತ್ತದೆ. ಇಂತಹ ಪೂಜೆಯನ್ನು ಭಗವಂತನಾಗಲೀ ಭಗವದ್ಭಕ್ತನಾದ ಗಣಪತಿಯಾಗಲೀ ಸ್ವೀಕರಿಸುವುದಿಲ್ಲ. ಜಗದ್‌ವೃಕ್ಷದ ಮೂಲಬೇರು ಭಗವಂತ. ಮೂಲಕ್ಕೆ ನೀರೆರೆದರೆ ಕೊಂಬೆಗಳು ಪುಷ್ಟಿ ಪಡೆದು ಫಲನೀಡುವಂತೆ ಅಂತರ್ಯಾಮಿ ದೇವರಿಗೆ ಸಲ್ಲಿಸಿದ ಪೂಜೆಯಿಂದ ಗಣೇಶಾದಿದೇವತೆಗಳು ಸತ್ಫಲವನ್ನು ನೀಡುತ್ತಾರೆ.

**ಯಥಾ ತರೋರ್ಮೂಲನಿಷೇಚನೇನ**

**ತೃಪ್ಯಂತಿ ತತ್‌ಸ್ಕಂಧಭುಜೋಪಶಾಖಾಃ ।**

**ಪ್ರಾಣೋಪಹಾರಾಚ್ಚ ಯಥೇಂದ್ರಿಯಾಣಾಂ**

**ತಥಾರ್ಹಣಂ ಕೇವಲಮಚ್ಯುತೇಜ್ಯಾ ॥ (ಭಾಗವತ)**

ವೃಕ್ಷಮೂಲಸೇಚನದಿಂದ ಶಾಖೋಪಶಾಖೆಗಳು ಪುಷ್ಟಿ ಪಡೆಯುವಂತೆ ಅಚ್ಯುತನ ಪೂಜೆಯಿಂದ ಇತರ ದೇವತಾತೃಪ್ತಿ. ಹೊಟ್ಟೆಗೆ ಅನ್ನವೀ–ಯುವುದರಿಂದ ಎಲ್ಲಾ ಇಂದ್ರಿಯಗಳು ಶಕ್ತಿಯುತವಾಗುವಂತೆ ಅಚ್ಯುತನ ಪೂಜೆಯಿಂದ ಇತರ ದೇವತಾತುಷ್ಟಿ.

ಆದಿಯಲ್ಲಿ ಪೂಜ್ಯನಾದ ಗಣಪತಿಯನ್ನು ಅಗ್ನಿಮುಖದಿಂದಲೂ ಆರಾಧಿಸುವುದು ಶಾಸ್ತ್ರೀಯ. ಈ ಹೋಮಕ್ಕೆ ಗಣಪತಿಹೋಮ ಅಥವಾ ಗಣಹೋಮವೆಂದು ಹೆಸರು. ದೇವತಾಪ್ರತಿಷ್ಠೆ, ಋಕ್‌ಸಂಹಿತಾಯಾಗ ಮುಂತಾದ ಹಲವು ದಿನ ನಡೆಯುವ ಕರ್ಮಾನುಷ್ಠಾನಗಳಲ್ಲಿ ನಿರ್ವಿಘ್ನತಾ ಸಿದ್ಧಿಗಾಗಿ ಮೊದಲು ಗಣಹೋಮ ಮಾಡುತ್ತಾರೆ. ಗಣಪತಿಯ ದೇವಸ್ಥಾನ–ಗಳಲ್ಲಿ ಸಾನ್ನಿಧ್ಯಸಿದ್ಧಿಗಾಗಿ ನಿತ್ಯಗಣಹೋಮ ಅಥವಾ ಚತುರ್ಥಿಗೊಮ್ಮೆ ಹೋಮ ನಡೆಸಲಾಗುತ್ತದೆ. ಕರಾವಳಿಯಲ್ಲಿನ ಜನತೆ ವರ್ಷಕ್ಕೊಂದಾ ದರೂ ಗಣಹೋಮವನ್ನು ಸ್ವಗೃಹದಲ್ಲಿ ನೆರವೇರಿಸುತ್ತಾರೆ. ಯಾವುದೇ ನೂತನ ಕಾರ್ಯಾರಂಭದಲ್ಲಿ ಗಣಹೋಮ ನಡೆದೇ ತೀರುತ್ತದೆ.

ಈ ಹೋಮ ಉಳಿದ ಹೋಮಗಳಂತೆ ವಿಸ್ತೃತಪ್ರಕ್ರಿಯೆಯನ್ನು ಅಪೇಕ್ಷಿಸುವುದಿಲ್ಲ. ಇದನ್ನು ನಡೆಸುವ ತಂತ್ರ ಬೇರೆಯದು. ವಾಸಿಷ್ಠ ಸಂಹಿತೆಯ ವಿನಾಯಕೋದಯದಲ್ಲಿ ನಿರೂಪಿಸಿದ ಆಪೂರಿತತಂತ್ರದಿಂದ ಗಣಹೋಮ ನಡೆಯುತ್ತದೆ. ಇದರ ಪ್ರಕಾರ ಇದರಲ್ಲಿ ಇತರ ಯಜ್ಞಗಳಲ್ಲಿ ಅನಿವಾರ್ಯಗಳಾದ ಪ್ರಣೀತಾಪಾತ್ರೆ, ಬ್ರಹ್ಮ, ಇಧ್ಮಾದಾನ, ಚಕ್ಷುಷೀ ಹೋಮ, ಸ್ವಿಷ್ಟಕೃದಾದಿ ಹೋಮಗಳು ಇರುವುದಿಲ್ಲ.

**ನ ಪ್ರಣೀತಾ ನ ಚ ಬ್ರಹ್ಮಾ ನ ಚೇಧ್ಮಂ ನ ಚ ಚಕ್ಷುಷೀ ।**
**ನ ಚ ಸ್ವಿಷ್ಟಕೃದಾದೀನಿ ವಿಘ್ನಶಂಕರಯಾಗಯೋಃ ॥**

ಗಣಹೋಮವನ್ನು ಬಡವನೂ ಆಚರಿಸಬಹುದು. ಉಳ್ಳವನೂ ಆಚರಿಸಬಹುದು. ಬಡವನಿಗೆ ಚಿಕ್ಕಹೋಮ, ಉಳ್ಳವನಿಗೆ ದೊಡ್ಡಹೋಮ, ಮಧ್ಯಮನಿಗೆ ಮಧ್ಯಮ.

**ಧನಾಢ್ಯೇ ದ್ರವ್ಯಬಾಹುಲ್ಯೇ ಹೋಮಬಾಹುಲ್ಯಮಿಷ್ಯತೇ ।**
**ಮಧ್ಯೇ ತು ಮಧ್ಯಮಃ ಪ್ರೋಕ್ತಃ ಸ್ವಲ್ಪೇ ಸ್ವಲ್ಪತರಃ ಸ್ಮೃತಃ ॥**
**(ವಿಷ್ಣುಸಂಹಿತಾ)**

ಒಂದು ಕಾಯಿಯ ಗಣಹೋಮಕ್ಕೆ ನಾಲ್ಕು ಆಹುತಿಗಳು. 3 ಕಾಯಿಗೆ 12. ಹೀಗೆ ಆಹುತಿಸಂಖ್ಯೆಯನ್ನು ಕಾಯಿಸಂಖ್ಯೆಗೆ ಅನುಸಾರ ವಾಗಿ ತಿಳಿದುಕೊಳ್ಳಬೇಕು. ಕಾಯಿಸಂಖ್ಯೆ ಇಷ್ಟೇ ಎಂಬ ನಿಯಮವಿಲ್ಲ. ಒಂದು ಕಾಯಿಂದಾರಂಭಿಸಿ, 3, 6, 12, 48, 108, 1008, 10,008 ಹೀಗೆ ಒಂದು ಲಕ್ಷದ ಹನ್ನೊಂದುಸಾವಿರದ ನೂರಾಹನ್ನೊಂದು(1,11,111) ಕಾಯಿಯವರೆಗೂ ಹೋಮ ಮಾಡಬಹುದು. ನಾಲ್ಕುಲಕ್ಷದ ನಲವತ್ತು ಸಾವಿರದ ನಾನೂರನಲವತ್ತನಾಲ್ಕು (4,44,444) ಆಹುತಿಗಳನ್ನು ಹೇಳಿರುವುದು ಇದನ್ನು ಪ್ರಮಾಣೀಕರಿಸಿದೆ.

ಒಂದು ಕಾಯಿ ಹೋಮ, ಮೂರು ಕಾಯಿ ಹೋಮ ಎಂದರೇನು?

ಗಣಹೋಮದಲ್ಲಿ ಆಹುತಿದ್ರವ್ಯ ಅಷ್ಟದ್ರವ್ಯ. ಅಷ್ಟದ್ರವ್ಯವೆಂದರೆ ಎಂಟು ವಸ್ತುಗಳನ್ನು ನಿಯತಪರಿಮಾಣದಲ್ಲಿ ಮೇಲನ ಮಾಡಿದ ಕಜ್ಜಾಯ. ಮೋದಕ, ಅವಲಕ್ಕಿ, ಅರಳು, ಅರಶಿನಹಿಟ್ಟು, ಕಬ್ಬು, ತೆಂಗಿನಕಾಯಿ, ಕರಿಎಳ್ಳು, ಬಾಳೆಹಣ್ಣು ಎಂಬ ಎಂಟು ದ್ರವ್ಯಗಳಲ್ಲದೇ ಅಪೇಕ್ಷಿತವಾದಷ್ಟು ಬೆಲ್ಲ, ಜೇನು ಹಾಗೂ ತುಪ್ಪಗಳನ್ನು ಸೇರಿಸಬೇಕು.

**ಮೋದಕಾಃ ಪೃಥುಕಾ ಲಾಜಾಃ ಸಕ್ತವಶ್ಚ ರಸಾನಕಾಃ ।**
**ನಾರಿಕೇರಾಃ ತಿಲಾ ರಂಭಾಃ ಪಕ್ವಾಷ್ಟದ್ರವ್ಯಮೀರಿತಮ್ ॥**

**ಗುಡಮಧ್ವಾಜ್ಯಸಿಕ್ತಾನಿ ದ್ರವ್ಯಾಣ್ಯೇತಾನಿ ಹೋಮಯೇತ್ ।**
**ಏಕಸ್ಮಿನ್ ನಾರಿಕೇರೇಽತ್ರ ಕುಡವೈಕಮಿತಾಸ್ತಿಲಾಃ ।**
**ಅಷ್ಟಾಷ್ಟಮುಷ್ಟಿಮಾನಾಃ ಸ್ಯುಃ ಲಾಜಾಃ ಪೃಥುಕಸಕ್ತವಃ ॥**

ಮಾತುಗಳ ಆಧಾರದಂತೆ ಒಂದು ಕಾಯಿಗೆ 8 ಮೋದಕ, ಅರಳು, ಅವಲಕ್ಕಿ, ಅರಳಿಟ್ಟುಗಳು 8 ಮುಷ್ಟಿ, ಕಬ್ಬು 8 ಗಂಟು, ಬಾಳೆ ಹಣ್ಣು 8, ಒಂದು ಕುಡವ ಎಳ್ಳು (ಕುಡವ=ಕುಡ್ತೆ), ತುಪ್ಪ ಅರ್ಧಕುಡ್ತೆ ಹಾಗೂ ಜೇನು ಅರ್ಧ ಕುಡ್ತೆ, ಬೆಲ್ಲ ಒಂದು ತೆಂಗಿನಕಾಯಿಯಷ್ಟು. ಇದೇ ಪರಿಮಾಣವನ್ನು 3, 6, 12 ಮೊದಲಾದ ಕಾಯಿಸಂಖ್ಯೆಗೆ ಅನುಗುಣವಾಗಿ ಹೆಚ್ಚಿಸಿಕೊಳ್ಳಬೇಕು.

ಈ ರಸಯುಕ್ತ ಅಷ್ಟದ್ರವ್ಯವನ್ನು ಎರಡು ಸಮಪಾಲು ಮಾಡಿ ಒಂದು ಭಾಗವು ಹೋಮಕ್ಕಾಗಿಯೂ ಎರಡನೆಯದು ನೈವೇದ್ಯಕ್ಕಾಗಿಯೂ ವಿನಿಯುಕ್ತವಾಗುತ್ತದೆ. ಹೋಮದಲ್ಲಿ ಮುಷ್ಟಿಪರಿಮಿತವಾದ ಆಹುತಿ ನೀಡಲಾಗುತ್ತದೆ. ಕದಲೀ, ಕಬ್ಬು, ಕಾಯಿಗಳ ಸಿಪ್ಪೆ, ಗೆರಟೆಗಳನ್ನು ಅಗ್ನಿಯಲ್ಲಿ ಹಾಕಲಾಗುತ್ತದೆ. 'ಚರ್ಮಾಣಿ ಕಾದಲಾದೀನಾಮಶೇಷಾ–ಣ್ಯನಲೇ ಕ್ಷಿಪೇತ್' ಆದ್ದರಿಂದಲೇ ಗಣಹೋಮ ಹೆಚ್ಚು ಹೊಗೆಯುಂಟು ಮಾಡುವ ಕ್ಷಿಪ್ರಪ್ರಸಾದಕ ಹೋಮ.

* * *

# ಪವಮಾನ ಹೋಮ

'ಸ್ವಾದಿಷ್ಠಯಾ ಮದಿಷ್ಠಯಾ....' ಎಂದು ಆರಂಭವಾಗುವ ಪವಮಾನ ಮಂತ್ರಗಳನ್ನು ತಿಳಿಯುದವರಿಲ್ಲ. ಪವಮಾನಹೋಮದಲ್ಲಿ ಈ ಮಂತ್ರಗಳಿಂದಲೇ ಪ್ರಧಾನಾಹುತಿ.

ಋಗ್ವೇದದ ಶಾಕಲಸಂಹಿತೆಯಲ್ಲಿ ಒಟ್ಟು 10,552 ಮಂತ್ರಗಳು. ಇವು ಹತ್ತು ಮಂಡಲಗಳಲ್ಲಿ ವಿಭಕ್ತವಾಗಿವೆ. ಶತರ್ಚಿನ, ಗಾರ್ತ್ಸಮದ, ವೈಶ್ವಾಮಿತ್ರ, ವಾಮದೇವ, ಆತ್ರೇಯ, ಭಾರದ್ವಾಜ, ವಾಸಿಷ್ಠ, ಗಾಯತ್ರ ಎಂಬ ಎಂಟು ಮಂಡಲವಾದ ಮೇಲೆ ಒಂಭತ್ತನೆಯದ್ದಾದ ಪಾವಮಾನ್ಯ ಮಂಡಲವಿದೆ. ಇದಕ್ಕೆ ಸೌಮ್ಯಮಂಡಲವೆಂದೂ ಹೆಸರು. ಈ ಮಂಡಲದಲ್ಲಿ 1,108 ಮಂತ್ರಗಳಿವೆ. ಇವು ಪವಮಾನಸೋಮದೇವತಾಕ ಮಂತ್ರಗಳು. ವಸ್ತುತಃ ಇವಿಷ್ಟೂ ಪವಮಾನಸೂಕ್ತಗಳೇ. ಹಾಗಿದ್ದರೂ ಸಂಪ್ರದಾಯದಂತೆ ಆರಂಭದ 610ಮಂತ್ರಗಳು ಮಾತ್ರ ಪವಮಾನ ಸೂಕ್ತಗಳೆಂದು ಕರೆಸಿಕೊಂಡು ಪಾರಾಯಣ ಹೋಮಾದಿಗಳಲ್ಲಿ ಚಾಲ್ತಿ -ಯಲ್ಲಿವೆ. ಖಿಲಭಾಗದ ವೇದಮಂತ್ರವೂ ಇದನ್ನು ಸ್ಪಷ್ಟಪಡಿಸಿದೆ.

**ದಶೋತ್ತರಾನ್ ಋಚಾಂ ಚೈವ ಪಾವಮಾನೀಃ ಶತಾನಿ ಷಟ್ ।**
**ಏತಜ್ಜುಹ್ವನ್ ಜಪೇನ್ಮಂತ್ರಂ ಘೋರಮೃತ್ಯುಭಯಂ ಹರೇತ್ ॥**

ಪವಮಾನಸೂಕ್ತದ 610 ಮಂತ್ರ ಪಠಿಸುತ್ತಾ ಹೋಮಿಸಿದರೆ ಘೋರಮೃತ್ಯುವಿನ ಪರಿಹಾರವಿದೆ. ಪವಮಾನ ಮಂತ್ರಗಳು ಹೆಚ್ಚಿನವು

ಗಾಯತ್ರೀ ಛಂದಸ್ಸಿನಲ್ಲಿವೆ. ಇವು ಪುಟ್ಟಪುಟ್ಟ ಮಂತ್ರಗಳು. 24ಅಕ್ಷರದವು. ಇವನ್ನು ಪಠಿಸುವುದು ಬಹುಸುಲಭ. ಸಾವಧಾನದಿಂದ ಪಠಿಸಿದಾಗ ಕೇಳುವುದಕ್ಕೂ ಹಿತ. ಶ್ರವಣದಿಂದಲೇ ಪಾಪಹರಣ.

## ಪವಮಾನಸೂಕ್ತ ಪ್ರತಿಪಾದ್ಯ

ಬೃಹತಿ ಸಹಸ್ರದಂತೆ ಪವಮಾನವೂ ಭಗವಂತನಿಗೆ ಬಹಳ ಪ್ರಿಯವಾದುದು. ಬೃಹತೀಸಹಸ್ರವನ್ನು 'ಉಕ್ಥ' ಭಗವಂತನ ಅನ್ನ ಎಂದು ಉಪನಿಷತ್ತು ಕರೆದಿದೆ. ಪವಮಾನವನ್ನು ನೀರಾಜನ, ಮಂಗಳಾರತಿಯಂತೆ ಭಗವಂತನಿಗೆ ಪ್ರಿಯ ಎಂದು ಭಾಗವತ ಸ್ತುತಿಸಿದೆ. ಇದಕ್ಕೆ ಕಾರಣ ಈ ಮಂತ್ರಗಳಲ್ಲಿ ಪ್ರತಿಯೊಂದು ಮಂತ್ರವೂ ಹರಿಯನ್ನೂ ಹರಿದಾಸನಾದ ಮುಖ್ಯಪ್ರಾಣನನ್ನೂ ಕೊಂಡಾಡುತ್ತಿದೆ. ಹರಿವಾಯುಗಳನ್ನಲ್ಲದೇ ಭಾರತೀ ದೇವಿ, ಸೋಮ(ಚಂದ್ರ) ಹಾಗೂ ಅಗ್ನಿಪುರುಷನನ್ನೂ ಪವಮಾನ ಮಂತ್ರಗಳು ಪ್ರತಿಪಾದಿಸುತ್ತಿವೆ.

ಸರ್ವೋತ್ತಮನಾದ ಶ್ರೀಹರಿ. ಜೀವೋತ್ತಮ ವಾಯು, ವಾಯುಪತ್ನಿ ಭಾರತೀ, ಸೋಮಾಭಿಮಾನಿಚಂದ್ರ ಹಾಗೂ ಯಜ್ಞಪುರುಷ ಅಗ್ನಿ ಈ ಐವರನ್ನೂ ಸ್ತುತಿಸಿ ಪೊಗಳುವ ಶಸ್ತ್ರಮಂತ್ರ ಪವಮಾನ. ಈ ಐವರಿಗೂ ಪವಮಾನಸೋಮ ಎಂದೇ ಹೆಸರು.

'ಮಾ' ಎಂದರೆ ತಾಯಿ. ಜಗನ್ಮಾತೆಯಾದ ಲಕ್ಷ್ಮೀದೇವಿ. 'ಇಂದಿರಾ ಲೋಕಮಾತಾ ಮಾ' ಎಂದಿದೆ ಅಮರಕೋಶ. ಉ-ಅಂದರೆ ಉತ್ಕೃಷ್ಟ. ಸ್ತ್ರೀದೇವಿಯರಲ್ಲಿ ಲಕ್ಷ್ಮೀದೇವಿಗಿಂತ ಉತ್ಕೃಷ್ಟರಿಲ್ಲ. ಉತ್ಕೃಷ್ಟಳಾದ ತಾಯಿ ರಮೆಯೇ ಉಮಾ ಎನಿಸಿದ್ದಾಳೆ. ಜೀವಸ್ತ್ರೀಯರಲ್ಲಿ ಸರ್ವೋತ್ಕೃಷ್ಟಳಾದ ಭಾರತೀದೇವಿಯೂ 'ಉಮಾ' ಎನಿಸುತ್ತಾಳೆ. 'ಉಮಯಾ ಸಹಿತಃ ಸೋಮಃ' ಉಮೆಯಿಂದ ಕೂಡಿರುವವ ಸೋಮ. ಲಕ್ಷ್ಮೀಪತಿ ಹಾಗೂ ಭಾರತೀರಮಣ. ಈ ಎರಡು ಸೋಮರೂ ಪವಮಾನರು. 'ಪವತೇ ಪಾವಯತಿ ಇತಿ ವಾ ಪವಮಾನಃ' ಪವಿತ್ರೀಕರಿಸುವವ ಹಾಗೂ ಸಂಸಾರದಿಂದ ಪಾರುಮಾಡುವವ ಪವಮಾನ. ನಾಮಸ್ಮರಣ ಮಾತ್ರದಿಂದ ಪಾಪಶೈಲಗಳನ್ನು ಸುಟ್ಟು

ಪವಿತ್ರೀಕರಿಸಿ ಸಂಸಾರ–ಸಾಗರವನ್ನು ದಾಟಿಸಿ ಮುಕ್ತಿಯನ್ನೀವ ಮುಕುಂದನು ಪವಮಾನ.

ಹಾಗೆಯೇ ಸಾಧಕನಿಗೆ ಗುರುವಾಗಿ, ಮುಕ್ತಿಮಾರ್ಗವನ್ನು ತೋರಿ ಪೊರೆಯುವ ವಾಯುದೇವರೂ ಪವಮಾನ. ಈತ ಬೀಸುವ ಗಾಳಿಯಲ್ಲಿ ನಿಂತು ಶುದ್ಧಿಗೊಳಿಸುತ್ತಾನೆ. ಶಾಸ್ತ್ರಸಾಗರದಲ್ಲಿ ಮುಳುಗಿಸಿ, ತೇಲಿಸಿ ಶುದ್ಧಿಗೊಳಿಸುತ್ತಾನೆ. **'ವಿಷ್ಣುರ್ಹಿ ದಾತಾ ಮೋಕ್ಷಸ್ಯ ವಾಯುಶ್ಚ ತದನುಜ್ಞಯಾ'** ಎಂಬಂತೆ ಮೋಕ್ಷವನ್ನಿತ್ತು ಪಾರುಗಾಣಿಸುತ್ತಾನೆ. ಆದ್ದರಿಂದ ವಾಯುವೂ ಎರಡನೆಯ ಪವಮಾನ.

'ಸೋಮ' ಶಬ್ದಕ್ಕೆ ನಿರ್ಮಲಮನಸ್ಸು ಹಾಗೂ ಪರಿಶುದ್ಧ ವಾಙ್ಮಯ ಎಂಬ ಅರ್ಥವೂ ಇದೆ. 'ಇಮೇ ಸೋಮಾ ಅರಂಕೃತಾ' ಎಂಬ ವೇದವನ್ನು ವ್ಯಾಖ್ಯಾನಿಸುವಾಗ ಆಚಾರ್ಯರು ಈ ಅರ್ಥವನ್ನು ನಿರೂಪಿ–ಸಿದ್ದಾರೆ. ಇಂತಹ ಮನಸ್ಸು ಹಾಗೂ ವಾಙ್ಮಯದ ಅಭಿಮಾನಿನಿಯಾದ ಭಾರತೀದೇವಿಯೂ ಸೋಮ ಎನಿಸಿದ್ದಾಳೆ. ಅಭಿಮನ್ಯಮಾನವನ್ನು ಹೇಳುವ ಶಬ್ದ ಅಭಿಮಾನಿಯನ್ನು ಹೇಳುವುದಷ್ಟೇ. 'ಮಮ ವಚಸಿ ನಿಧತ್ತಾಂ ಸನ್ನಿಧಿಂ ಮಾನಸೇ ಚ' ಎಂದಂತೆ ವಾಕ್ ಹಾಗೂ ಮನಸ್ಸಿನಲ್ಲಿ ಸನ್ನಿಹಿತಳಾಗಿ ನಮ್ಮನ್ನು ಪಾರುಗಾಣಿಸುವ ದೇವಿ ಭಾರತಿಯೂ ಪವಮಾನ ಸೋಮಳೇ.

ಸೋಮ ಎಂಬ ಲತೆಯಿದೆ. ಇದನ್ನು ಗುದ್ದಿ ಹಿಂಡಿ ರಸ ತೆಗೆಯಲಾಗುತ್ತದೆ. ಸೋಮರಸವನ್ನು ಅಗ್ನಿಯಲ್ಲಿ ಹೋಮಿಸುವ ಅಂಶವುಳ್ಳ ಶ್ರೌತಯಾಗವು ಸೋಮಯಾಗವೆನಿಸಿದೆ. ಈ ಸೋಮಯಾಗಕ್ಕೆ ಸಂಬಂಧಿಸಿದ ಒಬ್ಬ ದೇವ ಅಗ್ನಿ. ಇವನೂ ಸೋಮ. ಸೋಮಲತೆಗೆ ಅಭಿಮಾನಿ ಔಷಧೀಪತಿಯಾದ ಚಂದ್ರ. ಚಂದ್ರನಂತೂ ಸೋಮನೆಂದೇ ಪ್ರಸಿದ್ಧನಾಗಿದ್ದಾನೆ. ಅವನ ವಾರವೂ ಸೋಮವಾರವೆನಿಸಿದೆ. ಈ ಅಗ್ನಿ ಚಂದ್ರರಿಬ್ಬರೂ ಸೋಮಶಬ್ದವಾಚ್ಯರು. ಈ ಅಗ್ನೀಷೋಮರು ಯುಗಲ ದೇವತೆಗಳು. ಮಿತ್ರಾವರುಣರಂತೆ ಅಥವಾ ಇಂದ್ರಾಗ್ನಿಗಳಂತೆ ಒಂದೇ ಆಹುತಿಯನ್ನು ಈರ್ವರೂ ಸ್ವೀಕರಿಸುತ್ತಾರೆ.

ಯಜ್ಞಪುರುಷನ ಚಕ್ಷುಸ್ಸುಗಳೆ- ನಿಸಿ ಚಕ್ಷುಹೋರ್ೞವುದ ಎರಡು ಆಹುತಿಗಳನ್ನು ಪ್ರತಿಯೊಂದು ಯಾಗದಲ್ಲೂ ಪಡೆಯುತ್ತಾರೆ.

ಸೋಮಾಭಿಮಾನಿ ಚಂದ್ರನೂ ಪವಿತ್ರೀಕರಿಸುವುದರಿಂದ ಪವಮಾನ. ಯಜ್ಞಶಿಷ್ಟವಾದ ಸ್ವಾದಿಷ್ಠವೂ ಮದಿಷ್ಠವೂ ಆದ ಸೋಮರಸವನ್ನು ಸ್ವೀಕರಿಸಿದವನನ್ನು ಪವಿತ್ರೀಕರಿಸಿ ಜ್ಞಾನ ತುಂಬುವವ ಚಂದ್ರ. ಅಗ್ನಿ ಯಂತೂ ಸ್ವಯಂ ಪವಿತ್ರವಾಗಿದ್ದು ಎಲ್ಲವನ್ನೂ ಶುದ್ಧಿಗೊಳಿಸುವ ಪಾವಕ. ಆದ್ದರಿಂದಲೇ ಪವಮಾನ. ಹೀಗಾಗಿ ಅಗ್ನಿಚಂದ್ರರೀರ್ವರೂ ಪವಮಾನ ಸೋಮರೆನಿಸಿದ್ದಾರೆ. ಹೀಗೆ **'ಅಗ್ನಿರ್ವೈ ದೇವಾನಾಮವಮಃ ವಿಷ್ಣುಃ ಪರಮಃ'** ಎಂಬ ಬ್ರಾಹ್ಮಣ ವಚನದಂತೆ ಜ್ಞಾನಿಶ್ರೇಷ್ಠರಿಂದ ಉಪಾಸ್ಯ ದೇವತೆಗಳಲ್ಲಿ ಕನಿಷ್ಠನೆನಿಸಿದ ಅಗ್ನಿಯಿಂದ ಆರಂಭಿಸಿ ಗರಿಷ್ಠನೆನಿಸಿದ ವಿಷ್ಣುವಿನ ತನಕದ ಪಂಚದೇವತೆಗಳನ್ನು ವಿಶೇಷವಾಗಿ ಕೊಂಡಾಡುವ ಮಂತ್ರಗಳು ಪವಮಾನ ಮಂತ್ರಗಳು.

ಅಗ್ನಿಯು ಅಂತಃಕರಣ ಶುದ್ಧಿಯನ್ನೂ ವಾಕ್‌ಶುದ್ಧಿಯನ್ನೂ ನೀಡುತ್ತಾನೆ. ಚಂದ್ರನು ಮನೋಭಿಮಾನಿಯಾಗಿದ್ದು ಶುದ್ಧಾಂತಃಕರಣ ವನ್ನು ದೇವರೆಡೆ ಹರಿಸುತ್ತಾನೆ. ಭಾರತೀದೇವಿ ಅಲ್ಲಿ ವೇದಾರ್ಥ ಜ್ಞಾನ ವನ್ನು ತುಂಬಿದರೆ, ವಾಯುದೇವ ಭಗವಂತನೆಡೆಗೆ ಕರೆದೊಯ್ಯುತ್ತಾನೆ. ಭಗವಂತ ವಿಷ್ಣು ತಾನು ದರ್ಶನವಿತ್ತು ಅನಂತಾನಂದವನ್ನೀಯುತ್ತಾನೆ. ಇಂತಹ ಸಾಧನೆಗೆ ಸಂಬಂಧಿಸಿದ ಐದು ದೇವತೆಗಳ ಸ್ತುತಿ ಪವಮಾನ ಸೂಕ್ತ.

ಹೀಗಾಗಿಯೇ ಈ ಹೋಮದಲ್ಲಿ ಐದು ಕಲಶಗಳ ಪ್ರತಿಷ್ಠೆ ವಿಹಿತ. ಐದು ಕಲಶಗಳಲ್ಲಿ ಐದು ದೇವತೆಗಳನ್ನು ಚಿಂತಿಸುವುದಲ್ಲದೇ ಪ್ರಾಣಾ –ಪಾನಾದಿ ಪಂಚಪ್ರಾಣ ರೂಪಗಳನ್ನೂ ಅವುಗಳಲ್ಲಿ ಅಂತಃಸ್ಥಿತ ವಾದ ನಾರಾಯಣ, ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂಬ ಪಂಚರೂಪೀ ವಿಷ್ಣುವನ್ನು ಅನುಸಂಧಾನಕ್ಕೆ ತಂದುಕೊಳ್ಳಬೇಕು.

ಹೀಗೆ ಹರಿವಾಯುಗಳ ಪಂಚರೂಪಗಳ ಉಪಾಸನೆಗೆ ಪ್ರತೀಕವಾಗಿ ಪಂಚಕಲಶ(ಅಥವಾ ಒಂದೇ ಕಲಶದಲ್ಲಿಪಂಚೋಪಾಸನೆ)ಗಳಲ್ಲಿ ಪವಮಾನಸೂಕ್ತದ ಅಭಿಮಂತ್ರಣೆಯನ್ನು ನಡೆಸಬೇಕು.

ಕಲಶದ ದಕ್ಷಿಣ (ನೈಋತ್ಯ) ಭಾಗದಲ್ಲಿ ಅಗ್ನಿಪ್ರತಿಷ್ಠೆ ಮಾಡಿ ಪುರುಷ ಸೂಕ್ತ ಹಾಗೂ ಪವಮಾನ ಸೂಕ್ತಗಳಿಂದ ಆಜ್ಯಾಹುತಿಯ ಮೂಲಕ ಆರಾಧಿಸಬೇಕು.

## ಪವಮಾನ ಹೋಮದ ಉದ್ದೇಶ

ಹರಿವಾಯುಪ್ರೀತಿಯೊಂದೇ ಪವಮಾನಹೋಮದ ಮುಖ್ಯ ಉದ್ದೇಶ ಫಲವೆನಿಸಿದೆ. ಹಾಗಿದ್ದರೂ ಮೂರು ಉದ್ದೇಶದಿಂದ ಹೋಮದ ವಿಧಿಯಿದೆ. ಪ್ರಾಯಶ್ಚಿತ್ತ, ಪೌಷ್ಟಿಕ ಹಾಗೂ ಶಾಂತಿಕ. ಶ್ರಾದ್ಧದಂದು ನಡೆಸುವ ಪವಮಾನಹೋಮ ಸಾಮಾನ್ಯವಾಗಿ ಪ್ರಾಯಶ್ಚಿತ್ತದ ಉದ್ದೇಶ ವುಳ್ಳದ್ದು. ಶ್ರೇಯಸ್ಸನ್ನು ಬಯಸಿ ನಡೆಸುವುದು ಪೌಷ್ಟಿಕ. ಗ್ರಹಸಂಧಿ, ಪಂಚಮ ಶನಿ, ಷಷ್ಠಿಪೂರ್ತಿ ಮುಂತಾದ ಸಂದರ್ಭಗಳಲ್ಲಿ ದೋಷ-ಶಾಂತಿಗಾಗಿ ನಡೆಸುವಂಥದು ಶಾಂತಿಕ.

**ಪ್ರಾಯಶ್ಚಿತ್ತೇ ವಿಶೇಷೇಣ ಶಾಂತಿಕೇ ಪೌಷ್ಟಿಕೇ ತಥಾ ।**
**ಯಜನಂ ಪವಮಾನೇನ ವಿಷ್ಣುಪ್ರೀತಿಕರಂ ಶುಭಮ್ ॥**

ಈ ಮೂರೂ ಉದ್ದೇಶದಿಂದ ನಡೆಸಿದ ಪವಮಾನ ಹೋಮವೂ ವಿಷ್ಣುಪ್ರೀತಿಕರವಾಗಿ ಶುಭಪ್ರದವೆನಿಸಿದೆ.

ಉದ್ದೇಶ ಪ್ರಾಯಶ್ಚಿತ್ತವಾದರೆ ಅಲ್ಲಿ ಪ್ರತಿಷ್ಠಾಪಿಸುವ ಅಗ್ನಿಯ ಹೆಸರು 'ವಿಟಪ'. ಶಾಂತಿಕವಾದರೆ 'ವರದ'. ಪೌಷ್ಟಿಕವಾದರೆ ಬಲವರ್ಧನ. **(ಶಾಂತಿಕೇ ವರದೋ ಹ್ಯಗ್ನಿಃ ಪೌಷ್ಟಿಕೇ ಬಲವರ್ಧನಃ । ಪ್ರಾಯಶ್ಚಿತ್ತೇ ತು ವಿಟಪಃ)** ಪ್ರಾಯಶ್ಚಿತ್ತಹೋಮದಲ್ಲಿ ಆಜ್ಯದ ಬದಲು ತಿಲದ್ರವ್ಯವನ್ನೂ ಹೋಮಿಸಬಹುದು. ತಿಲವನ್ನು ಮೃಗೀಮುದ್ರೆಯಿಂದ ಹೋಮಿಸಬೇಕು.

'ತೋರುಬೆರಳು ಹಾಗೂ ಕಿರುಬೆರಳನ್ನು ದೂರದಲ್ಲಿ ಬಿಟ್ಟು ಉಳಿದೆರಡು ಬೆರಳುಗಳನ್ನು ಅಂಗುಷ್ಠದೊಂದಿಗೆ ಜೋಡಿಸಿದಾಗ ಅದು ಮೃಗೀಮುದ್ರೆಯೆನಿಸುತ್ತದೆ. ಎರಡು ಬೆರಳುಗಳು ಮೃಗದ ಕೋಡುಗಳಂತೆ-ಯೂ ಜೋಡಿಸಿದ ಮೂರು ಬೆರಳುಗಳು ಮೃಗದ ಮೂತಿಯಂತೆಯೂ ಕಾಣಿಸುವುದರಿಂದ ಇದು ಮೃಗೀಮುದ್ರೆ.

**'ತಿಲಸಕ್ತುಕಣಾದೀನಾಂ ಮೃಗೀಮುದ್ರಾಪ್ರಮಾಣತಃ'** ಎಂದಿರುವಂತೆ ಈ ಮೂರು ಬೆರಳುಗಳಲ್ಲಿ ಒತ್ತಿ ಹಿಡಿಸಬಹುದಾದಷ್ಟೇ ತಿಲವನ್ನು ಒಂದೊಂದೂ ಆಹುತಿಗೆ ಹಾಕಬೇಕು.

## ಪವಮಾನಖಿಲ :

ಪವಮಾನ ಮಂತ್ರಗಳಿಗೆ ಸಂಬಂಧಿಸಿದಂತೆ ಸುಮಾರು 21 ಋಕ್‌ಗಳಷ್ಟು ವಿಸ್ತಾರವಾದ ಖಿಲಭಾಗವಿದೆ. ಖಿಲಭಾಗವೂ ಋಗ್ವೇದವೇ. ಋಗ್ವೇದದಲ್ಲಿ 24 ಶಾಖೆಗಳಿದ್ದವು. ಇಂದು ಚಾಲ್ತಿಯಲ್ಲಿರುವ ಶಾಕಲ ಶಾಖೆಯಲ್ಲಿ ಶಾಖಾಂತರದ ಲಭ್ಯಮಂತ್ರಗಳನ್ನು ಖಿಲಮಂತ್ರ ಅಥವಾ ಪರಿಶಿಷ್ಟಗಳೆಂದು ಪರಿಸಲಾಗುತ್ತದೆ. ಪ್ರಕೃತ ಪವಮಾನಖಿಲಭಾಗವು ಪವಮಾನ ಮಂತ್ರಗಳ ಮಹತ್ವವನ್ನೂ ಪಾಪನಾಶನ ಸಾಮರ್ಥ್ಯವನ್ನೂ ಸುಂದರವಾಗಿ ನಿರೂಪಿಸಿದೆ. ನಮ್ಮಿಂದ ಘಟಿಸಬಹುದಾದ ದೊಡ್ಡ ಪಾಪಗಳ ಪಟ್ಟಿಯನ್ನು ನೀಡಿ ಈ ಮಂತ್ರಗಳಿಂದ ಆ ಪಾಪಸಂಬಂಧಿ ಕೊಳೆಯನ್ನು ತೊಳೆದುಬಿಡಬಹುದೆಂದಿದೆ.

**'ಪಾವಮಾನೀಃ ಸ್ವಸ್ತ್ಯಯನೀಃ'** ಈ ಪವಮಾನ ಮಂತ್ರಗಳು ಅಮಂಗಳ ನಿವರ್ತಕಗಳು. ಅಲ್ಲದೇ ಅಭೀಷ್ಟಫಲದಾಯಿಗಳು. ಋಷಿಗಳು ವೇದಸಾಗರವನ್ನು ಮಂಥನ ಮಾಡಿ ನಿಷ್ಪಾದಿಸಿದ ಅಮೃತ ರಸವಿದು. ಕ್ಷೀರಸಾಗರ ಮಥನದಲ್ಲಿ ಲಬ್ಧವಾದ ಅಮೃತವು ಸುರರ ಕಂಠವನ್ನು ಸೇರಿದಂತೆ ವೇದಸಾಗರ ಮಂಥನದಲ್ಲಿ ಲಭ್ಯವಾದ ಈ ಪವಮಾನಾ-ಮೃತವು ಭೂಸುರರ ಕಂಠದಲ್ಲಿಡಲ್ಪಟ್ಟಿತು. **'ಋಷಿಭಿಃ ಸಂಭೃತೋ ರಸೋ ಬ್ರಾಹ್ಮಣೇಷ್ವಮೃತಂ ಹಿತಮ್'.**

ಹೀಗೆ ವಿಪ್ರಕಂಠದಲ್ಲಿ ಉದ್ಘೋಷಿತವಾಗುವ ಪವಮಾನ ಮಂತ್ರ ನಮಗೆ ಪಾರತ್ರಿಕವಾದ ಪುಣ್ಯಫಲವನ್ನು ಕೊಡುವುದಲ್ಲದೇ ರೋಗನಿವೃತ್ತಿ, ಮೃತ್ಯುದೋಷ ಪರಿಹಾರ ಮೊದಲಾದ ಐಹಿಕ ಫಲವನ್ನೂ ನೀಡುತ್ತಿದೆ. ಭಗವಂತನ ಬಲಕೈಯಲ್ಲಿ ಶೋಭಿಸುವ ಸುದರ್ಶನಕ್ಕೆ **'ಸಹಸ್ರಧಾರ'** ಎಂದು ಹೆಸರು. ಈ ಸಹಸ್ರಧಾರವು ಪವಿತ್ರೀಕಾರಕ. ಸುದರ್ಶನ ಚಕ್ರದ ತಪ್ತಮುದ್ರೆಯ ಧಾರಣೆಯಿಂದಲೂ ಪಾಪಹರಣವಾಗಿ ಪಾವಿತ್ರ್ಯವು ಪ್ರಾಪ್ತವಾಗುತ್ತದೆ. ದೇವತೆಗಳೂ ಸುದರ್ಶನಧ್ಯಾನದಿಂದ ತಮ್ಮನ್ನು ಪವಿತ್ರೀ –ಕರಿಸಿಕೊಳ್ಳುತ್ತಾರೆ. ಅಂತಹ ಸುದರ್ಶನಸದೃಶವಾದುವುಗಳು ಈ ಪವಮಾನಮಂತ್ರಗಳು.

'ಪ್ರಾಜಾಪತ್ಯಕೃಚ್ಛ್ರ' ಮೊದಲಾದ ಪ್ರಾಯಶ್ಚಿತ್ತಕರ್ಮಗಳಿವೆ. ಹತ್ತಾರು ದಿನಗಳಲ್ಲಿ ಉಪವಾಸವೇ ಮೊದಲಾದ ಕ್ಲೇಶಗಳಿಂದ ಸುಲಭಸಾಧ್ಯವಲ್ಲದ ಪ್ರಾಜಾಪತ್ಯಕೃಚ್ಛ್ರ ಚಾಂದ್ರಾಯಣ ಮೊದಲಾದ ಕರ್ಮಾಚರಣೆಯ ಫಲವು ಈ ಪವಮಾನ ಮಂತ್ರಗಳಿಂದ ಲಭ್ಯವಾಗಿದೆ. ಈ ಮಂತ್ರಗಳಿಂದ ಹರಿವಾಯುಗಳನ್ನು ಸ್ತುತಿಸುವವನ ಸುತ್ತ ದಿಕ್ಕುಗಳಲ್ಲಿ ಇಂದ್ರಾಗ್ನಿಯಮಾದಿ ದಿಕ್ಪಾಲಕರು ನಿಂತು ಎಂದೆಂದೂ ಪಾಲಿಸುತ್ತಾರೆ.

"ಮೋಕ್ಷಾಕಾಂಕ್ಷಿಗಳಾಗಿ ಋಷಿಗಳು ಉಗ್ರತಪಶ್ಚರ್ಯೆಯನ್ನು ನಡೆಸಿದರು. ಉತ್ಕೃಷ್ಟ ತಪಸ್ಸಿನ ಉತ್ಕಟ ಸ್ಥಿತಿಯಲ್ಲಿ ಆ ಮಹರ್ಷಿಗಳು ಪವಮಾನ ಮಂತ್ರಗಳನ್ನು ಪಠಿಸಿದರು. ಅ ಮಂತ್ರಗಳಿಂದ ಅದ್ಭುತ ಅನುಭವವನ್ನೂ ಸತ್ಫಲವನ್ನೂ ಪಡೆದ ಮುನಿಗಳು ಪವಮಾನ ಮಂತ್ರ ಗಳನ್ನು ಬಗೆಬಗೆಯಾಗಿ ಕೊಂಡಾಡಿದರು. ಪವಮಾನ ಸೂಕ್ತದಿಂದ ಪರಿಹರಿಸಲ್ಪಡುವ ಪಾಪಗಳ ಪಟ್ಟಿಯನ್ನೇ ನಮಗಿತ್ತರು.

ಒಬ್ಬ ವ್ಯಕ್ತಿ ತಾಯಿಯ ಗರ್ಭದಲ್ಲಿ ವಾಸಮಾಡುತ್ತಿರುವಾಗಲೇ ಹಲವು ಯೋಚನೆಗಳನ್ನು ಮಾಡುತ್ತಾ ಪುಣ್ಯ–ಪಾಪಗಳನ್ನು ಸಂಪಾದಿಸುವುದಕ್ಕೆ ಆರಂಭಿಸುತ್ತಾನೆ. ಗರ್ಭಾಂಬುಪಾನ, ಬೀಜಗರ್ಭ ಸಮುದ್ಭವಕಲಂಕ, ಮಾತೃವಿಗೆ ಕ್ಲೇಶಪ್ರದಾನ ಮೊದಲಾದ ಪಾಪಗಳಿಗೆ ಭಾಜನನಾಗುತ್ತಾನೆ. ಇಂತಹ ಅನಿವಾರ್ಯ ಪಾಪಗಳಿಗೆ ಪವಮಾನವು ಪ್ರಾಯಶ್ಚಿತ್ತವೆನಿಸಿದೆ.

ಮುಂದೆ ಬಾಲ್ಯದಲ್ಲಿ ಈ ಮಗು ತಂದೆ-ತಾಯಿಯರ ಮಾತು ಮೀರಿ ಸ್ವಚ್ಛಂದ ವರ್ತಿಸುತ್ತದೆ. ಲೋಕದ ಮಂದಿಗೆ ಬೇಸರವಾಗುವಂತೆ ಕಟುಮಾತುಗಳಿಂದ ತಿವಿಯುವುದಿದೆ. ಇಂತಹ ಮಾತೃಪಿತೃವಚನೋ-ಲ್ಲಂಘನ, ಸ್ಥಾವರ-ಜಂಗಮ ಪ್ರಾಣಿಗಳ ಹಿಂಸೆ, ಉದ್ವೇಗಕರ ವ್ಯಾಹರಣ ಮೊದಲಾದ ದೋಷಗಳಿಂದ ಬಿಡುಗಡೆ ಈ ಪವಮಾನಮಂತ್ರಗಳಿಂದ.

"ಗೋವಧೆ, ಚೌರ್ಯ, ಸ್ತ್ರೀವಧೆ, ಬ್ರಹ್ಮವಧ, ಸುರಾಪಾನ, ಸ್ವರ್ಣಸ್ತೇಯ, ವೃಷಲಿಗಮನ, ಗುರುದಾರಾಭಿಗಮ, ಬಾಲಹತ್ಯೆ, ಮಾತೃವಧ, ಪಿತೃವಧ, ಭೂಭಾಗಹರಣ ಮೊದಲಾದ ಪಾಪಗಳಿಗೆ ಪ್ರಾಯಶ್ಚಿತ್ತವಿದು.

ಇಲ್ಲಿ ಗೋವಧೆಯೆಂದರೆ ಸಾಕ್ಷಾತ್ ಗೋವನ್ನು ಸಂಹರಿಸುವುದೆಂದರ್ಥವಲ್ಲ. ಅಂತಹ ಗೋವಧೆಗೆ ಪ್ರಾಯಶ್ಚಿತ್ತವಿಲ್ಲ. ಗೋವನ್ನು ಸಿಟ್ಟಿನಿಂದ ಹೊಡೆದು ಗಾಯಗೊಳಿಸುವುದು. ಆಹಾರವನ್ನೀಡದೆ ಉಪವಾಸ ಹಾಕುವುದು, ಕಟುಕರ ಕೈಗೆ ಮಾರುವುದು ಮೊದಲಾದ ಕೆಲಸಗಳು ಗೋವಧೆಯೆನಿಸಿವೆ. ಅಂತೆಯೇ ಹತ್ತುಮಂದಿಯ ಮುಂದೆ ತಂದೆತಾಯಿಯರನ್ನು ಅಪಮಾನಿಸುವಿಕೆ. ಮಾತೃ-ಪಿತೃವಧೆಯೆನಿಸಿದೆ. ಓರ್ವ ಶ್ರೋತ್ರಿಯ ವಿಪ್ರನನ್ನು ಗೌರವಿಸದೆ ಅವಮಾನಿಸಿದಾಗ ಅದು ಬ್ರಹ್ಮಹತ್ಯೆ. ಸ್ತ್ರೀಯ ಮಾನಭಂಗವು ಸ್ತ್ರೀಹತ್ಯೆ. ಇಂತಹ ಪಾಪಗಳು ಪ್ರಮಾದದಿಂದ ಘಟಿಸಿದ್ದಲ್ಲಿ ಶುದ್ಧಿಸಂಪಾದಕವಾದುದು ಈ ಮಂತ್ರ.

ಸುರಾಪಾನವೆಂದರೂ ಸಾಕ್ಷಾತ್ ಮದ್ಯಪಾನವಲ್ಲ. ಹೊರತು ಸುರಾಪಾನ ತುಲ್ಯವಾದ ಪಾಪಗಳು. ನಿಂತುಕೊಂಡು ಎಡಗೈಯಿಂದ ನೀರುಕುಡಿಯುವುದು ಸುರಾಪಾನತುಲ್ಯ. ಔಷಧಕ್ಕಾಗಿ ವೈದ್ಯರ ಆದೇಶದ ಮೇರೆಗೆ ಮಾಡುವ ಆಸವಾದಿ ರೂಪವಾದ ಸುರಾಪಾನವೂ ಪವಮಾನ ಮಂತ್ರಗಳಿಂದ ಪ್ರಾಯಶ್ಚಿತ್ತಾರ್ಹವಾಗುತ್ತದೆ.

ಪಾಪಿಷ್ಠರ ಕೈಯಿಂದ ದಾನವನ್ನು ಪ್ರತಿಗ್ರಹಿಸಿದ್ದರಿಂದ ಬರಬಹುದಾದ ಪಾಪ, ವಿಪ್ರನು ಲಾಭದ ಉದ್ದೇಶದಿಂದ ಕ್ರಯ-ವಿಕ್ರಯಗಳನ್ನು

ನಡೆಸುವುದರಿಂದ ಉಂಟಾಗುವ ದೋಷ, ಮನೆಯಲ್ಲಿ ಆಶ್ರಿತವರ್ಗಕ್ಕೆ ಹೊಟ್ಟೆಪೂರ್ತಿ ಊಟಹಾಕದಿರುವುದರಿಂದ ಉಂಟಾಗುವ ಅನರ್ಥಗಳಿಗೂ ಪವಮಾನದಿಂದ ಪರಿಹಾರವಿದೆ. ಮತ್ತೊಬ್ಬರಿಗೆ ಕೊಡದೆ ತಾನೊಬ್ಬನೇ ತಿನ್ನುವುದು ಹಾಗೂ ಉಣ್ಣಬಾರದ್ದನ್ನು ಉಣ್ಣುವುದರಿಂದ ಉಂಟಾಗುವ ಪಾಪಗಳಿಗೂ ಪವಮಾನದಿಂದ ಪರಿಹಾರ.

**"ಬ್ರಾಹ್ಮಣೇನ ನಿಷ್ಕಾರಣೇನ ಷಡಂಗೋ ವೇದೋಽಧ್ಯೇತವ್ಯಃ"** ಎಂಬ ವೇದವಾಣಿ ಹೇಳುವಂತೆ ಬ್ರಾಹ್ಮಣನು ಯಾವುದೇ ಫಲನಿರೀಕ್ಷೆಯಿಲ್ಲದೇ ಷಡಂಗಸಹಿತ ವೇದಾಧ್ಯಯನವನ್ನು ನಡೆಸಬೇಕು. ಇದು ವಿಪ್ರನಿಗೆ ಸಂಧ್ಯಾವಂದನಾದಿಗಳಂತೆ ವಿಹಿತಕರ್ಮ. ವೇದಾಧ್ಯಯನಕ್ಕೆ ಬೆನ್ನುಹಾಕಿ ಅರ್ಥಶಾಸ್ತ್ರ, ಆಯುರ್ವೇದಾದಿಗಳನ್ನು ಮಾತ್ರ ಓದಿದರೆ ಅದು 'ದುರಧೀತ'ವೆನಿಸುತ್ತದೆ. ಈ ದೋಷಕ್ಕೂ ಪವಮಾನವು ಪ್ರಾಯಶ್ಚಿತ್ತ.

ವಿವಾಹಿತನಾದ ವ್ಯಕ್ತಿಗೆ ವಿವಾಹದ ದಿನ ಲಾಜಹೋಮ ನಡೆಸುವುದು ಗೃಹ್ಯಾಗ್ನಿಸಿದ್ಧಿಗಾಗಿ. ಆ ವಿವಾಹಾಗ್ನಿಯನ್ನು ತನ್ನಲ್ಲಿ ಆರೋಪಣೆ ಮಾಡಿಕೊಂಡು ಅದೇ ಅಗ್ನಿಯಲ್ಲಿ ಪ್ರತಿನಿತ್ಯ ಔಪಾಸನವನ್ನು ಆತ ನಡೆಸಿಕೊಂಡು ಬರಬೇಕು. ಪಂಚಸೂನಾಪ್ರಾಯಶ್ಚಿತ್ತಾರ್ಥ ಹಾಗೂ ಅನ್ನಸ್ವೀಕಾರದ ಅರ್ಹತೆಗಾಗಿ ವೈಶ್ವದೇವವನ್ನೂ ನಡೆಸಬೇಕು. ಔಪಾಸನ-ವೈಶ್ವದೇವಾದಿಯಜನಗಳನ್ನು ನಡೆಸದವ ದೋಷಿಯೆನಿಸುತ್ತಾನೆ. ಈ ದೋಷದ ಪರಿಮಾರ್ಜನೆ ಪವಮಾನಮಂತ್ರಗಳಿಂದ.

ಯಜ್ಞ ನಡೆಸುವಾಗ ಹಲವು ಅಪರಾಧಗಳು ಘಟಿಸುವ ಸಾಧ್ಯತೆಯಿದೆ. ಯಜ್ಞಾಂಗಗಳ ಪೂರ್ವಾಪರೀಕರಣ, ಕರ್ಮಾಂಗಲೋಪ ಮುಂತಾದ ದೋಷಗಳ ಪ್ರಾಯಶ್ಚಿತ್ತಕ್ಕಾಗಿಯೂ ಪವಮಾನಮಂತ್ರವಿದೆ.

ಅಮಂತ್ರಾನ್ನಹೋಮವೂ ಒಂದು ದೋಷ. ಅಂದರೆ ಮಂತ್ರ ಹೇಳದೇ ಅಗ್ನಿಯಲ್ಲಿ ಹೋಮಿಸುವುದು. ಪರಿಷೇಕಾದಿ ಮಂತ್ರರಹಿತವಾಗಿ ಊಟಮಾಡುವುದೂ ಅಮಂತ್ರಾನ್ನಹೋಮವೇ.

**"ಪ್ರಾಣಾಗ್ನಿಹೋತ್ರ"** ಎಂಬುದು ಭೋಜನಕ್ಕೆ ಶಾಸ್ತ್ರೀಯ ಹೆಸರು. ಅಂದರೆ ಭೋಜನವೆಂಬುದೊಂದು ಯಜ್ಞ. ಜಠರದಲ್ಲಿ ಅಗ್ನಿಯಿದೆ. ಭಗವಂತ ವೈಶ್ವಾನರನಾಗಿ ಉದರದಲ್ಲಿ ಸನ್ನಿಹಿತನಾಗಿದ್ದಾನೆ. ಅವನಲ್ಲಿ ಆಹುತಿ ನೀಡುವ ಅಗ್ನಿಹೊತ್ರವೇ ಊಟ. ಅದಕ್ಕಾಗಿ ಉಪನೀತವ್ಯಕ್ತಿ ಮಡಿಯುಟ್ಟು ಸಾವಧಾನತೆಯಿಂದ ಉಣ್ಣಬೇಕು. ಅಗ್ನಿಹೋತ್ರದಲ್ಲಿ ಪರಿಷೇಕ, ಸ್ವಾಹಾಕಾರಗಳಿರುವಂತೆ ಪ್ರಾಣಾಗ್ನಿಹೋತ್ರದಲ್ಲೂ ಪರಿಷೇಕ ಮಾಡಿ 'ಪ್ರಾಣಾಯ ಸ್ವಾಹಾ' ಮೊದಲಾದ ಪಂಚಮಂತ್ರಗಳಿಂದ ಜಠರಾಗ್ನಿಯಲ್ಲಿ ಆಹುತಿ ನೀಡಬೇಕು.

ಈ ಮಂತ್ರಗಳನ್ನು ಹೇಳದೇ ಗಡಿಬಿಡಿಯಿಂದ ವ್ಯಗ್ರಚಿತ್ತತೆಯ ಭೋಜನವು ಅಮಂತ್ರಾನ್ನಹೋಮವೆನಿಸುತ್ತದೆ. ಇದು ಪಾಪ. ಅಂತಹ ಪಾಪಗಳೂ ಪ್ರಮಾದದಿಂದ ಘಟಿಸಿದ್ದರೆ ಅದಕ್ಕೂ ಪ್ರಾಯಶ್ಚಿತ್ತ ಈ ಪವಮಾನಹೋಮ.

ಮನುಷ್ಯ ತಾನು ಜನಿಸುವಾಗಲೇ ಹೊತ್ತುಕೊಂಡು ಬಂದ ದೇವ ಋಣ, ಋಷಿಋಣ, ಪಿತೃಋಣಗಳ ಪರಿಹಾರದ ಉದ್ದೇಶದಿಂದಲೂ ಪವಮಾನಹೋಮ ಮಾಡಬಹುದು. ಸಂಸಾರಜಂಜಾಟದಿಂದ ಬಿಡುಗಡೆಯನ್ನು ಕೊಡುವ ಈ ಪವಮಾನ ಮಂತ್ರಗಳನ್ನು ಪಠಿಸಿ ಪೂಜಿಸಿದಾಗ ಪಿತೃದೇವತೆಗಳಿಗೆ ಆಹಾರವಾಗಿ ಕ್ಷೀರ, ಸರ್ಪಿ, ಮಧು, ಉದಕಗಳೆಂಬ ಪಿತೃಪ್ರಿಯ ಆಹಾರವು ಲಭ್ಯವಾಗುತ್ತದೆ. ಹಾಗಾಗಿಯೇ ಶ್ರಾದ್ಧಾದಿ ಕರ್ಮದ ಜೊತೆಗೆ ಪವಮಾನ ಪಾರಾಯಣಾದಿಗಳು ಹೆಚ್ಚು ಉಚಿತವಾಗಿವೆ. ಮರೆವು, ಅನವಧಾನತೆ, ಅಚಾತುರ್ಯ ಮೊದಲಾದ ಕಾರಣಗಳಿಂದ ಶ್ರಾದ್ಧತಿಥಿಯಂದು ಶ್ರಾದ್ಧ ಮಾಡದಿದ್ದಾಗ, ನೆನಪಾದ ಕೂಡಲೇ 'ಪವಮಾನ ಪ್ರಾಯಶ್ಚಿತ್ತಹೋಮ' ನಡೆಸಿ ಶ್ರಾದ್ಧವನ್ನು ಆಚರಿಸಬೇಕು.

ಋಷಿಗಣಕ್ಕೂ ಕ್ಷೀರ–ಸರ್ಪಿ–ಮಧು–ಉದಕಗಳನ್ನು ಕಲ್ಪಿಸಿಕೊಡು ವುದರ ಮೂಲಕ ಈ ಸೂಕ್ತ ಋಷಿಪ್ರೀತಿಕರವಾಗಿದೆ. ಸರ್ವೋತ್ತಮ ಶ್ರೀಹರಿಯನ್ನೂ

ಗುರುವಾಯುವನ್ನೂ ಸ್ತುತಿಸುತ್ತಾ ದೇವಗಣವನ್ನು ಪ್ರೀತಿಗೊಳಿಸುವ ಈ ಮಂತ್ರ ದೇವ-ಋಷಿ-ಪಿತೃಗಣದ ಪ್ರಸನ್ನತೆಗೆ ಕಾರಣವಾಗಿದೆ.

ಈ 610ಮಂತ್ರಗಳನ್ನು ಪಠಿಸುತ್ತಾ ಹೋಮಾದಿಗಳನ್ನು ಆಚರಿಸುವುದರಿಂದ ಘೋರಮೃತ್ಯುಭಯವೂ ಪರಿಹಾರವಾಗುತ್ತದೆ. ಪುಣ್ಯಕರ, ಪಾಪಹರ ಹಾಗೂ ರೋಗ-ಮೃತ್ಯು-ಪರಿಹಾರಕವೂ ಆದ ಈ ಮಂತ್ರವನ್ನು ಪಠಿಸುವವರಿಗಲ್ಲದೇ ಕೇಳುವವರಿಗೂ ಪರಗತಿ ಪ್ರಾಪ್ತವಾಗುತ್ತದೆ.

**ಏತತ್ ಪುಣ್ಯಂ ಪಾಪಹರಂ ರೋಗಮೃತ್ಯುಭಯಾಪಹಮ್ ।**
**ಪಠತಾಂ ಶೃಣ್ವತಾಂ ಚೈವ ದದಾತಿ ಪರಮಾಂ ಗತಿಮ್ ॥**

ಹೀಗೆನ್ನುತ್ತಾ ಪವಮಾನಖಿಲಭಾಗವು ಸಮಾಪ್ತವಾಗಿದೆ.

ಒಟ್ಟಿನಲ್ಲಿ ವೇದವನ್ನು ವೇದಭಾಗವೇ ಹಾಡಿಹೊಗಳಿದುದರಿಂದ ಪವಮಾನಹೋಮವು 'ಅತಿಪ್ರಶಸ್ತ' ಎಂಬುದು ಸರ್ವವಿದಿತ.

## ಪೂಯಮಾನಹೋಮ :

ಪೂಯಮಾನಹೋಮವು ಪವಮಾನ ಹೋಮದ್ದೇ ವಿಸ್ತೃತರೂಪ. ಋಗ್ವೇದದ ಒಂಭತ್ತನೇ ಮಂಡಲದ ಆರಂಭದಿಂದ 610ಮಂತ್ರಗಳಿಂದ ಹೋಮಿಸಿದರೆ ಅದು ಪವಮಾನ ಹೋಮವೆನಿಸಿದೆ. ಮುಂದಿನ ಮಂತ್ರಗಳನ್ನು ಸೇರಿಸಿ ಸಮಗ್ರ ನವಮ ಮಂಡಲದ ಮಂತ್ರಗಳಿಂದ ಹೋಮಿಸುವುದೇ ಪೂಯಮಾನಹೋಮ. ಇದರಲ್ಲಿ ಪಾವಮಾನ್ಯಮಂಡಲದ 1,108ಮಂತ್ರಗಳಿಂದ ಆಜ್ಯಾಹುತಿಯನ್ನು ನೀಡಲಾಗುತ್ತದೆ.

* * *

# ಧನ್ವಂತರಿ ಹೋಮ

## ಧನ್ವಂತರಿ ಧ್ಯಾನ

ಆಚಾರ್ಯಮಧ್ವರು ತಂತ್ರಸಾರ ಸಂಗ್ರಹದಲ್ಲಿ ಹೇಳಿರುವ ಹೋಮ ಧನ್ವಂತರಿ ಹೋಮ. ಧನ್ವಂತರಿಯನ್ನು ಧ್ಯಾನಿಸುತ್ತಾ ಹೋಮಿಸಬೇಕು. ಅದಕ್ಕಾಗಿ ಮೊದಲು ಧ್ಯಾನಶ್ಲೋಕಗಳನ್ನು ಚಿಂತಿಸೋಣ.

ಕಳೆದು ಹೋದ ಸಂಪತ್ತನ್ನು ಮತ್ತೆ ಪಡೆಯುವದಕ್ಕಾಗಿ ದೇವ ದಾನವರು ಒಟ್ಟು ಸೇರಿದರು. ಕ್ಷೀರಸಾಗರವನ್ನು ಮಥಿಸಿದರು. ಬಗೆಬಗೆಯ ಸಂಪತ್ತು ಉದಿಸಿತು. ಮಥನದ ಕೊನೆಯ ಘಟ್ಟದಲ್ಲಿ ದೇವ ಧನ್ವಂತರಿ ಅಮೃತಕಲಶವನ್ನು ಹಿಡಿದುಕೊಂಡು ಸಾಗರದಿಂದ ಆವಿರ್ಭವಿಸಿದ.

ಒಂದು ಕೈಯಲ್ಲಿ ಜ್ಞಾನಮುದ್ರೆ.

ತೋರುಬೆರಳು ಅಂಗುಷ್ಠದ ತುದಿಯನ್ನು ಸವರಿದೆ. ಇದು ಹಾಲು ಕರೆಯುವ ಮುದ್ರೆ(ದೋಹನ ಮುದ್ರೆ). ಹಸುವಿನ ಕೆಚ್ಚಲಿನಿಂದ ಹಾಲು ಕರೆಯುವುದೂ ಇದೇ ಬೆರಳುಗಳಿಂದ. ಅಮಿತಶಾಸ್ತ್ರಗಳೆಂಬ ಗೋವಿನ ಸಾರವನ್ನು ಕರೆದು ಆಯುರ್ವೇದದ ಮೂಲಕ ನಮಗಿತ್ತ ದೇವ ಧನ್ವಂತರಿ. ಅದನ್ನು ತೋರುವ ಜ್ಞಾನಮುದ್ರೆ ಬಲಕೈಯಲ್ಲಿ.

ಎಡಕೈಯಲ್ಲಿ ಅಮೃತಪೂರ್ಣವಾದ ಹೇಮಕಲಶ. ಜರಾವ್ಯಾಧಿ ಗಳಿಂದ ಮುಕ್ತಿಗೊಳಿಸುವ ಪರಮೌಷಧ ಈ ಅಮೃತ. ಸ್ವಾದಿಷ್ಠವೂ ಮಾದಕವೂ ಆದ

ಈ ಸುಧೆಯನ್ನು ಎಷ್ಟು ಪಾನಮಾಡಿದರೂ ತೇಗು ಬರದು. ಮರ್ತ್ಯನನ್ನು ಅಮರನನ್ನಾಗಿಸಬಲ್ಲ ರಸಾಯನವಿದು. ಇದನ್ನು ಧರಿಸಿದ ಬಗೆಯೂ ಸುಂದರ. ಬರೇ **'ದಧಾನಂ'** ಎನ್ನಲಿಲ್ಲ. **'ಸಂದಧಾನಂ'**, ಎಂದರು. **ಜ್ಞಾನಂ ಸುಧಾಕಲಶಮೇವ ಚ 'ಸಂದಧಾನಂ'**

ದೇವ ಧನ್ವಂತರಿಯ ಶರೀರದ ಸೊಬಗು ಹೇಳಿ ಮುಗಿಯದು. ಮಡುಗಟ್ಟಿದ ಸ್ವಾತ್ಮಸುಖವೇ ಅವನ ಶರೀರ. ಸರ್ವಾಧಿಪತಿತ್ವದ ಲಕ್ಷಣದಿಂದ ಸಂಪನ್ನ. ಹಲವು ಚಂದ್ರರು ಒಂದೆಡೆ ಸೇರಿದರೆ ಅದರ ಕಾಂತಿಯೆಂಥದೋ ಅಂತಹ ಚೆಲುಕಾಂತಿ. ಬಿಸಿಲಿನಂತಹ ಬೇಗೆಯೂ ಇಲ್ಲ. ಬೆಳದಿಂಗಳಿನಂತೆ ಮಂದವೂ ಅಲ್ಲ. ಝಗಝಗಿಸುವ ತಂಪು ಪ್ರಭೆ. ಕಣ್ಣಿಗೆ ತಂಪೆನಿಸುವ ಬೆಳಕು. ಬೆಂದವನನ್ನು ತಂಪಾಗಿಸುವ ಜ್ಯೋತ್ಸ್ನೆ. ಅಮೃತಸ್ರಾವಿಯಾದ ತನ್ನ ತಂಪು ಕಿರಣಗಳಿಂದ ಜಗತ್ತಿಗೆ ಸಂಜೀವನವನ್ನು ನೀಡುವ ದೇವ ಧನ್ವಂತರಿಯನ್ನು ಚಂದ್ರಮಂಡಲದಲ್ಲಿ ಧ್ಯಾನಿಸಬೇಕು. ಆ ಚಂದ್ರಮಂಡಲವನ್ನು ತನ್ನೊಳಗೆ ಧ್ಯಾನಿಸಬೇಕು. ತನ್ನೊಳಗೆ ಚಂದ್ರಮಂಡಲವನ್ನು ಚಿಂತಿಸಿ ಆ ಚಂದ್ರಮಂಡಲದಲ್ಲಿ ಧನ್ವಂತರಿದೇವನನ್ನು ಧ್ಯಾನಿಸಬೇಕು.

ಇದು ಆಚಾರ್ಯರು ತಂತ್ರಸಾರದಲ್ಲಿ ನಿರೂಪಿಸಿದ ಧ್ಯೇಯ ಮೂರ್ತಿ :

**ಚಂದ್ರೌಘಕಾಂತಿಂ ಅಮೃತೋರು(ತಾತ್ಮ) ಕರೈರ್ಜಗಂತಿ**
**ಸಂಜೀವಯಂತಮಮಿತಾತ್ಮಸುಖಂ ಪರೇಶಮ್ ।**
**ಜ್ಞಾನಂ ಸುಧಾಕಲಶಮೇವ ಚ ಸಂದಧಾನಂ**
**ಶೀತಾಂಶುಮಂಡಲಗತಂ ಸ್ಮರತಾತ್ಮಸಂಸ್ಥಮ್ ॥**
**(ತಂತ್ರಸಾರ ಸಂಗ್ರಹ 4ನೇ ಅಧ್ಯಾಯ, 93ನೇ ಶ್ಲೋಕ)**

**ಚಂದ್ರೌಘಕಾಂತಿಂ** = ಚಂದ್ರಸಮುದಾಯದ ಕಾಂತಿಯಂತೆ ಕಾಂತಿಯುಳ್ಳ, **ಅಮೃತೋರುಕರೈಃ (ಅಮೃತಾತ್ಮಕರೈಃ) ಜಗಂತಿ ಸಂಜೀವಯಂತಂ** = ಅಮೃತ ಸಮಾನವಾದ ಶ್ರೇಷ್ಠ ಕಿರಣಗಳಿಂದ ಭುವನವನ್ನೆಲ್ಲಾ ಸಂಜೀವನಗೊಳಿಸುತ್ತಿರುವ, **ಅಮಿತಾತ್ಮಸುಖಂ** = ಮಿತಿಯಿಲ್ಲದ

ಆನಂದವೇ ಸ್ವರೂಪ(ದೇಹ)ವಾಗಿ ಉಳ್ಳ, **ಪರೇಶಂ** = ಪರರೆನಿಸಿದ ಲಕ್ಷ್ಮೀ ಬ್ರಹ್ಮರುದ್ರಾದಿಗಳಿಗೂ ಒಡೆಯನಾದ, **ಜ್ಞಾನಂ ಸುಧಾಕಲಶಮೇವ ಚ ಸಂದಧಾನಂ** = ಜ್ಞಾನಮುದ್ರೆಯನ್ನೂ, ಅಮೃತ ಕಲಶವನ್ನೂ ಎರಡು ಕೈಗಳಲ್ಲಿ ಚೆನ್ನಾಗಿ ಧರಿಸಿರುವ, **ಶೀತಾಂಶುಮಂಡಲ ಗತಂ** = ಚಂದ್ರಮಂಡಲದಲ್ಲಿರುವ ದೇವಧನ್ವಂತರಿಯನ್ನು, **ಆತ್ಮಸಂಸ್ಥಂ** = ತನ್ನಲ್ಲಿ ಸ್ಥಿತನೆಂಬುದಾಗಿ, **ಸ್ಮರತ** = ಸ್ಮರಿಸಿರಿ.

ಪಿಂಡಾಂಡದೊಳಗೂ ಬ್ರಹ್ಮಾಂಡವಿದೆ. ಶರೀರದ ಷಟ್‌ಚಕ್ರಗಳಲ್ಲೂ ಚಂದ್ರಮಂಡಲವಿದೆ. ಅಂತಃಸ್ಥ ಚಂದ್ರಮಂಡಲದಲ್ಲಿ ಧನ್ವಂತರಿಯನ್ನು ಧ್ಯಾನಿಸು. ಧ್ಯಾನವು ಒಳಮುಖ. ಎಲ್ಲಾ ಇಂದ್ರಿಯಗಳನ್ನೂ ಒಳಗೆಳೆ –ದುಕೋ. ಮನಸ್ಸನ್ನು ಕೇಂದ್ರೀಕರಿಸು. ಮೇಲ್ಕಂಡ ಧನ್ವಂತರಿದೇವನ ರೂಪವನ್ನು ಮನಸ್ಸಿನಲ್ಲಿ ಒತ್ತು. ಕೆಲವೇ ಸಮಯದಲ್ಲಿ ಮನಸ್ಸು ಒಳಗಿನ ಚಂದ್ರಮಂಡಲವನ್ನು ಕಾಣಿಸುತ್ತದೆ. ಚಂದ್ರಮಂಡಲದಲ್ಲಿ ತಂಪುಕಾಂತಿಯ ದೇವನನ್ನು ಕಾಣುತ್ತದೆ. ಮನಸ್ಸು ಶಾಂತವಾಗಿದೆ. ಉಸಿರು ನಿಧಾನವಾಗಿ ಸಾಗಿದೆ. ಒಳಗೊಳಗೇ ದಿವ್ಯ ಆನಂದದ ಅನುಭವ.

ಧ್ಯಾನದ ಆನಂದವನ್ನು ಇಂದಿನ ಮನುಷ್ಯ ಮರೆತೇ ಬದುಕುತ್ತಾನೆ. ದಿವ್ಯ ಆನಂದವನ್ನು ಒಮ್ಮೆಯೂ ಸವಿಯದ ಮನುಜನ ಬಾಳು ಬರಡು.

ಮುಂದಿನ ಶ್ಲೋಕದಲ್ಲಿ ಆಚಾರ್ಯರು ಧ್ಯಾನದ ಮಜಲನ್ನು ವಿಸ್ತರಿಸಿದ್ದಾರೆ. ಚಂದ್ರಬಿಂಬಸ್ಥ ದೇವನನ್ನು ಧ್ಯಾನಿಸಬಲ್ಲವ ಈ ಮುಂದಿನ ಮೆಟ್ಟಲಿಗೆ ಏರಬೇಕು. ಷಟ್‌ಚಕ್ರಗಳಲ್ಲಿ ಕ್ರಮವಾಗಿ ಮೇಲಿಂದ ಕೆಳಕ್ಕೆ ಧನ್ವಂತರಿಯನ್ನು ಧ್ಯಾನಿಸಬೇಕು.

**ಮೂರ್ಧ್ನಿಸ್ಥಿತಾದಮುತ ಏವ ಸುಧಾಂ ಸ್ರವಂತೀಂ**
**ಭ್ರೂಮಧ್ಯಗಾಚ್ಚ ತತ ಏವ ಚ ತಾಲುಸಂಸ್ಥಾತ್ ।**
**ಹಾರ್ದಾಚ್ಚ ನಾಭಿಸದನಾದಧರ ಸ್ಥಿತಾಚ್ಚ**
**ಧ್ಯಾತ್ವಾಭಿಪೂರಿತತನುರ್ದುರಿತಂ ನಿಹನ್ಯಾತ್ ॥**

**ಮೂರ್ಧ್ನಿಸ್ಥಿತಾತ್** = ನೆತ್ತಿಯಲ್ಲಿರುವ, **ಅಮುತ ಏವ** = ಚಂದ್ರ ಬಿಂಬಸ್ಥ ಧನ್ವಂತರಿಯಿಂದಲೇ, **ಸ್ರವಂತೀಂ ಸುಧಾಂ** = ಸ್ರವಿಸುತ್ತಿರುವ ಅಮೃತಧಾರೆಯನ್ನು ಸ್ಮರಿಸು. (**ಸುಧಾಂ ಸ್ರವಂತಂ ಸ್ಮರತ** = ಸುಧೆಯನ್ನು ಸುರಿಸುತ್ತಿರುವ ಧನ್ವಂತರಿ ದೇವರನ್ನು ಸ್ಮರಿಸು) **ಚ** = ಮತ್ತು, **ಭ್ರೂಮಧ್ಯಗಾತ್** = ಹುಬ್ಬಿನ ಮಧ್ಯದಲ್ಲಿರುವ **ತತ ಏವ** = ಅ ಚಂದ್ರ ಬಿಂಬಸ್ಥ ಧನ್ವಂತರಿಯಿಂದಲೇ ಸ್ರವಿಸುವ ಸುಧೆಯನ್ನು ಸ್ಮರಿಸು. **ಚ** = ಮತ್ತು **ತಾಲು ಸಂಸ್ಥಾತ್** = ಕುತ್ತಿಗೆಯ ಮೇಲ್ಭಾಗದಲ್ಲಿ ಕಿರುನಾಲಿಗೆಯ ಪ್ರದೇಶದಲ್ಲಿ ಸ್ಥಿತನಾದ, **ತತ ಏವ** = ಆ ದೇವನಿಂದಲೇ ಸುರಿಯುವ ಸುಧೆಯನ್ನು ಧ್ಯಾನಿಸು. **ಚ** = ಅಲ್ಲದೇ, **ಹಾರ್ದಾತ್** = ಹೃದಯದಲ್ಲಿರುವ ಆ ದೇವನಿಂದ ಸುರಿಸುವ ಸುಧೆಯನ್ನು ಧ್ಯಾನಿಸು. **ಚ** = ಹಾಗೆಯೇ **ನಾಭಿಸದನಾತ್** = ನಾಭಿಪ್ರದೇಶದಲ್ಲಿ ಕುಳಿತಿರುವ ಧನ್ವಂತರಿಯಿಂದ ಸುರಿಯುವ ಪೀಯೂಷವನ್ನು ಬಗೆಯಲ್ಲಿ ತುಂಬಿಕೋ. **ಚ** = ಮತ್ತು **ಅಧರಸ್ಥಿತಾತ್** = ಗುದಪ್ರದೇಶದ ಸಮೀಪದ ಮೂಲಾಧಾರದಲ್ಲಿ ಸ್ಥಿತನಾದ ಅದೇ ದೇವನಿಂದ ಸುರಿಯುವ ಅಮೃತವನ್ನು ಧ್ಯಾನಿಸು. ಹೀಗೆ ಆರುಭಾಗಗಳಲ್ಲಿ, **ಧ್ಯಾತ್ವಾ** = ಧ್ಯಾನಿಸಿ, **ಅಭಿಪೂರಿತತನುಃ** = ಧನ್ವಂತರಿ ದೇವನನ್ನೂ ಅಮೃತವನ್ನೂ, ಶರೀರದಲ್ಲಿ ತುಂಬಿಕೊಂಡವನಾಗಿ ಧ್ಯಾತೃವು, **ದುರಿತಂ** = ಪಾಪ,ರೋಗಾದಿಗಳನ್ನು **ನಿಹನ್ಯಾತ್** = ನಿರ್ಮೂಲ ಮಾಡಬಲ್ಲನು.

ನೆಟ್ಟಗೆ ಕುಳಿತುಕೋ. ನೆಲಕ್ಕೆ ತಾಗುವ ನಿನ್ನ ವೃಷಣಾಸನ ಮೂಲದಿಂದ ಪ್ರಾರಂಭವಾಗಿ ಜ್ಯೋತಿರ್ಮಯಿ ನಾಡಿಯೊಂದು ಮೇಲ್ಮುಖವಾಗಿ ಸಾಗಿದೆ. ನೆತ್ತಿಯನ್ನು ಭೇದಿಸಿ ಸಾಗುವ ಈ ನಾಡಿಯೇ ಸುಷುಮ್ನಾ ನಾಡಿ. ಇದರಲ್ಲಿ ಆರು ಕೇಂದ್ರಗಳಿವೆ. ನೆತ್ತಿ, ಭ್ರೂಮಧ್ಯ, ತಾಲು, ಹೃದಯ, ನಾಭಿ ಹಾಗೂ ಮೂಲಾಧಾರ(ವೃಷಣಮೂಲ). ಈ ಆರು ಕೇಂದ್ರಗಳು ಭಗವಂತನ ಆವಾಸವೆನಿಸಿದ ದೇವ ಸದನಗಳು. ಧ್ಯೇಯಬಿಂದುಗಳು. ಒಂದೊಂದಕ್ಕೂ ಹತ್ತು ಅಂಗುಲ ಅಂತರ.

ಶಿರದ ನಡುವಿನ ನೆತ್ತಿಯಲ್ಲಿ 12 ದಲದ ಪದ್ಮವಿದೆ. ಭ್ರೂಮಧ್ಯದಲ್ಲಿ ನಾಲ್ಕುದಲದ್ದು. ತಾಲು(ಗದ್ದದ ಸಮೀಪದ ಕುತ್ತಿಗೆ)ವಿನಲ್ಲಿ ದ್ವಿದಲಪದ್ಮ. ಹೃದಯದಲ್ಲಿ ಎಂಟು ಎಸಳಿನದು. ನಾಭಿಯಲ್ಲಿ ಆರರದು. ಮೂಲಾಧಾರ ದಲ್ಲಿ ನಾಲ್ಕರದು. ಈ ಪದ್ಮಗಳಲ್ಲಿ ಚಂದ್ರಮಂಡಲವನ್ನು ಚಿಂತಿಸು. ಅದರಲ್ಲಿ ಧನ್ವಂತರಿಯನ್ನು ಸ್ಮರಿಸು. ಸುರಿದ ಅಮೃತಧಾರೆ ನಿನ್ನನ್ನು ತುಂಬುತ್ತಿದೆ. ತುಂಬಿದ ಅಮೃತದಿಂದ ರೋಮಾಂಚನಗೊಂಡ ಅನುಭವವಾಗುತ್ತದೆ. ಈ ರೀತಿ ಭಕ್ತಿಯಿಂದ ಧ್ಯಾನಿಸಿದವನ ರೋಗ ನಿರ್ಮೂಲವಾಗಿದೆ. ದೇವ ಧನ್ವಂತರಿಯನ್ನು ತುಂಬಿಕೊಂಡವನಲ್ಲಿ ಪಾಪಗಳೆಲ್ಲ ಭಸ್ಮ.

ಈ ರೀತಿ ಧ್ಯಾನಿಸುತ್ತಾ ಧನ್ವಂತರಿ ಮಂತ್ರವನ್ನು ಜಪಿಸುವ ವ್ಯಕ್ತಿಗೆ ಈ ಮಂತ್ರ ಕಾಮಿಸಿದುದನೀವ ಕಾಮಧೇನುವಾಗುತ್ತದೆ. ದುಃಖಕಾರಣಗಳ ನ್ನೆಲ್ಲಾ ಹುರಿದು ಬಿಸುಡುತ್ತದೆ. ಸುಖವಿತ್ತು ಸಲಹುತ್ತದೆ. ದೆವ್ವ ಬಡಿದವನ ದೆವ್ವ ಬಿಡಿಸಲಬಲ್ಲದು ಈ ಮಂತ್ರ. ಹುಚ್ಚು ಹಿಡಿದವನ ಹುಚ್ಚನ್ನೂ ಓಡಿಸಬಲ್ಲದು, ನಿಷ್ಕಾಮನೆಯಿಂದ ಜಪಿಸಿ ಧ್ಯಾನಿಸುವ ಜಾಪಕನಿಗೆ ಸಾಂದ್ರಸ್ವಾನಂದವೆನಿಸಿದ ಮೋಕ್ಷವನ್ನೀವ ಧ್ಯಾನ ಧನ್ವಂತರಿ ಧ್ಯಾನ.

**ಅಜ್ಞಾನರೋಗಭಯದುಃಖಮಹಾವಿಷಾಣಿ**
**ಯೋಗೋಽಯಮಾಶು ವಿನಿಹಂತಿ ಸುಖಂ ಚ ದದ್ಯಾತ್ ।**
**ಉನ್ಮಾದವಿಭ್ರಮಹರಃ ಪರತಶ್ಚ ಸಾಂದ್ರ-**
**ಮಾನಂದಮೇವ ಪದಮಾಪಯತಿ ಸ್ಮ ನಿತ್ಯಮ್ ॥**

**ಅಯಂ ಯೋಗಃ** = ಈ ಧನ್ವಂತರಿ ಧ್ಯಾನವು (ಈ ಮಂತ್ರವು), **ಅಜ್ಞಾನ ರೋಗ ಭಯದುಃಖ ಮಹಾವಿಷಾಣಿ** = ಅಜ್ಞಾನ ಸಂಶಯಾದಿ ಗಳನ್ನು, ಜ್ವರಾದಿ ರೋಗಗಳನ್ನು, ಅಗ್ನಿ ಗ್ರಹಾದಿಗಳಿಂದುಂಟಾಗುವ ಭಯವನ್ನು, ಆಧ್ಯಾತ್ಮಿಕಾದಿ ತ್ರಿವಿಧ ದುಃಖವನ್ನೂ, ಶತ್ರುಗಳು ಪ್ರಯೋಗಿಸಿದ ಶರೀರದಲ್ಲಿರುವ ವಿಷಮದ್ದನ್ನೂ, **ಆಶು ವಿನಿಹಂತಿ** = ಶೀಘ್ರವಾಗಿ ನಾಶಮಾಡುತ್ತದೆ. **ಚ** = ಅಲ್ಲದೇ, **ಸುಖಂ ದದ್ಯಾತ್** = ಐಹಿಕ ಪಾರಲೌಕಿಕ ಸುಖವನ್ನೂ

ನೀಡುವುದು, ಈ ಮಂತ್ರವು, **ಉನ್ಮಾದ ವಿಭ್ರಮಹರಃ** = ಹುಚ್ಚನ್ನೂ, ಖಿನ್ನತೆಯನ್ನೂ ಇಲ್ಲವಾಗಿಸುವುದು. **ಪರತಃ ಚ** = ಪರ ಲೋಕದಲ್ಲಾದರೋ, **ಸಾಂದ್ರಸ್ವಾನಂದಂ ಪದಂ ಏವ** = ಮಡುಗಟ್ಟಿದ ಸ್ವರೂಪಾನಂದದ ಸ್ಥಾನವಾದ ಮೋಕ್ಷವನ್ನು, **ನಿತ್ಯಂ** = ನಿಚ್ಚಳವಾಗಿಯೂ(ಶಾಶ್ವತವಾಗಿಯೂ) **ಆಪಯತಿ ಸ್ಮ** = ಹೊಂದಿಸಿ ಕೊಡುತ್ತದೆ.

ಧನ್ವಂತರಿಧ್ಯಾನದಲ್ಲಿ ಎಲ್ಲವನ್ನೂ ಸಾಧಿಸಿಕೊಡುವ ಶಕ್ತಿ ಇದೆ. ಮನುಜನಿಗೆ ಭಯಕ್ಕೆ ಕಾರಣ ಅಜ್ಞಾನ. ಕತ್ತಲೆಯಲ್ಲೂ ಬೆದರುವುದು ಅಜ್ಞಾನದಿಂದ. ದುಃಖಕ್ಕೆ ಕಾರಣ ರೋಗ. ಅದರಲ್ಲೂ ಕೆಲವು ಆಧಿಗಳು, ಕೆಲವು ವ್ಯಾಧಿಗಳು. ಅಜ್ಞಾನರೋಗಗಳನ್ನು ಓಡಿಸುವ ಧಾನ್ವಂತರ ಯೋಗ ಭಯದುಃಖಗಳನ್ನು ಕಣ್ಮರೆಗೊಳಿಸಿದೆ.

ಎಲ್ಲಕ್ಕಿಂತ ಹೆಚ್ಚಾಗಿ ಈ ಮಂತ್ರದಲ್ಲೊಂದು ಪವಾಡಶಕ್ತಿ ಇದೆ. ಈ ಮಂತ್ರದ ಉಪದೇಶವಿಲ್ಲದ ವ್ಯಕ್ತಿಯ ರೋಗವನ್ನೂ ಯೋಗ್ಯಗುರುವು ಈ ಮಂತ್ರದ ಮೂಲಕ ವಾಸಿ ಮಾಡಬಹುದಾಗಿದೆ. ರೋಗಿ ಶುಚಿಯಾಗಿ ಆಚಮನ ಮಾಡಿ ಕುಳಿತುಕೊಳ್ಳಬೇಕು. ಭಕ್ತಿಯಿಂದ ದೇವನನ್ನು ಸ್ಮರಿಸಬೇಕು. ಜಾಪಕನು ತನ್ನ ಬಲಕೈಯಲ್ಲಿ ಅಮೃತಸುರಿಸುವ ಧನ್ವಂತರಿ ಯನ್ನು ಧ್ಯಾನಿಸುತ್ತಾನೆ. ಆ ಕೈಯನ್ನು ರೋಗಿಯ ತಲೆಯ ಮೇಲೆ ಇರಿಸುತ್ತಾನೆ. ಹತ್ತು ಬಾರಿಯೋ ನೂರುಬಾರಿಯೋ ಧನ್ವಂತರಿ ಮಂತ್ರವನ್ನು ಜಪಿಸುತ್ತಾನೆ. ಈಗ ರೋಗಿಯ ರೋಗ ಮಾಯವಾಗುತ್ತದೆ. ಅವನೀಗ ವೀತರೋಗ. ನಾರಾಯಣ ಭಕ್ತಿಯುಳ್ಳ ಪುರುಷನ ರೋಗ ಹೇತುವಾದ ಪಾಪ ಭಸ್ಮವಾಗಿದೆ.

**ಧ್ಯಾತ್ವೈವ ಹಸ್ತತಲಗಂ ಸ್ವಮೃತಂ ಸ್ರವಂತಂ**
**ದೇವಂ ಸ ಯಸ್ಯ ಶಿರಸಿ ಸ್ವಕರಂ ನಿಧಾಯ ।**
**ಆವರ್ತಯೇನ್ಮನುಮಿಮಂ ಸ ಚ ವೀತರೋಗಃ**
**ಪಾಪಾದಪೈತಿ ಮನಸಾ ಯದಿ ಭಕ್ತಿನಮ್ರಃ ॥**

**ಸಃ** = ಧನ್ವಂತರಿಯನ್ನು ಷಟ್‌ಚಕ್ರಗಳಲ್ಲಿ ಧ್ಯಾನಿಸಬಲ್ಲವನು, **ಸ್ವಮೃತಂ ಸ್ರವಂತಂ ದೇವಂ** = ಅಮೃತವನ್ನು ಸುರಿಸುವ ದೇವ ಧನ್ವಂತರಿಯನ್ನು, **ಹಸ್ತತಲಗಂ** = ಅಂಗೈಯಲ್ಲಿ, **ಧ್ಯಾತ್ವಾ ಏವ ಸ್ವಕರಂ** = ಧ್ಯಾನಿಸುತ್ತಲೇ ತನ್ನ ಕೈಯನ್ನು, **ಯಸ್ಯ ಶಿರಸಿ ನಿಧಾಯ** = ಯಾರ ತಲೆಯಲ್ಲಿಟ್ಟು, **ಇಮಂ ಮಂತ್ರಂ ಆವರ್ತಯೇತ್** = ಈ ಧನ್ವಂತರೀ ಮಂತ್ರವನ್ನು ಜಪಿಸುತ್ತಾನೋ, **ಸ ಚ** = ಆ ರೋಗಿಯು, **ಯದಿ ಮನಸಾ ಭಕ್ತಿನಮ್ರಃ** = ದೇವನಲ್ಲಿ ಏಕಾಗ್ರಮನಸ್ಸಿನಿಂದ ಭಕ್ತಿಯುಳ್ಳವನಾಗಿದ್ದರೆ, **ವೀತರೋಗಃ ಸನ್** = ರೋಗಮುಕ್ತನಾಗಿ, **ಪಾಪಾದಪೈತಿ** = ಪಾಪರಹಿತನಾಗುತ್ತಾನೆ.

ನರನನ್ನು ವ್ಯಾಧಿ ಕಾಡುವುದಕ್ಕೆ ಅವನ ಜನ್ಮಾಂತರದ ಪಾಪವೇ ಕಾರಣ(**'ಪೂರ್ವಜನ್ಮಕೃತಂ ಪಾಪಂ ವ್ಯಾಧಿರೂಪೇಣ ಬಾಧತೇ'**) ಎಂಬ ಮಾತಿದೆ. ಪಾಪ ಕರಗಿದಾಗ ವ್ಯಾಧಿ ತಾನಾಗಿ ಕಣ್ಮರೆಯಾಗುತ್ತದೆ. ಮಂತ್ರ ಧ್ಯಾನಗಳು ಪಾಪವನ್ನು ಕಳೆಯುತ್ತವೆ. ಅದರಲ್ಲೂ ಧನ್ವಂತರಿಯ ಧ್ಯಾನವು ರೋಗ ಹೇತುವಾದ ಪಾಪಗಳನ್ನು ಕಳೆಯುವ ಧ್ಯಾನ. ಪಾಪ ಕಳೆದು ರೋಗಮುಕ್ತನನ್ನಾಗಿಸುವ ಧ್ಯಾನ. ಕಟ್ಟಕಡೆಯದಾಗಿ ಸಂಸಾರ ವ್ಯಾಧಿಯನ್ನೇ ಕಳೆಯುವ ಮೋಚಕ ಧ್ಯಾನ. **'ಧಾನ್ವಂತರೋ ಮಹಾಮಂತ್ರಃ ಸಂಸೃತಿವ್ಯಾಧಿನಾಶನಃ'** ಈ ಧನ್ವಂತರಿ ಮಂತ್ರವು ಸಂಸಾರದಲ್ಲಿ ಬರುವ ರೋಗಗಳನ್ನು ವಾಸಿಮಾಡುವ ಮಂತ್ರ, ಕೊನೆಗೊಮ್ಮೆ ಸಂಸಾರವೆಂಬ ವ್ಯಾಧಿಯನ್ನೇ ಪರಿಹರಿಸಿ ಮುಕ್ತಿಯನ್ನೀವ ಮಂತ್ರ.

## ಧನ್ವಂತರಿ ಹೋಮದ ವಿಧಿವಿಧಾನಗಳು

ಸಮುದ್ರ ಮಥನದಿಂದ ವಿಷವೂ ಲಭಿಸಿತು. ಅಮೃತವೂ ದೊರೆಯಿತು. ಎರಡೂ ಮರ್ತ್ಯರಿಗೆ ಸಿಗಬೇಕೆಂಬ ಭಾವದಿಂದ ದೇವತೆ ಗಳು ವಿಷವನ್ನು ಬೇವಿನಮರದಲ್ಲಿ ಇಟ್ಟರು. ಅಮೃತವನ್ನು ಗುಲೂಚೀ ಎಂಬ ಬಳ್ಳಿಯಲ್ಲಿಟ್ಟರು. ಸಿಹಿಯಾದ ಸಸ್ಯದಲ್ಲಿ ಅಮೃತವನ್ನಿಟ್ಟಲ್ಲಿ ಅದು ಪಶುಪಕ್ಷಿಗಳ ಆಹಾರವಾಗಿ ಮಾನವನಿಗೆ ಲಭಿಸಲಾರದೆಂಬ ಕಾರಣದಿಂದ ಅತಿಕಹಿಯಾದ

ಗುಲೂಚೀಯನ್ನು ಅಮೃತನಿಧಾನಕ್ಕಾಗಿ ದೇವತೆಗಳು ಆರಿಸಿದರು. ಹೀಗಾಗಿ ಗುಲೂಚೀಬಳ್ಳಿ ಅಮೃತಬಳ್ಳಿಯೆನಿಸಿತು. ಆಯುರ್ವೇದದಲ್ಲಿ ಪರಮೌಷಧಿ ಲತೆಯೆನಿಸಿತು.

ಈ ಅಮೃತಬಳ್ಳಿಯನ್ನು ಧನ್ವಂತರಿ ಮಂತ್ರದಿಂದ ಆಹುತಿ ನೀಡುವ ಯಾಜ್ಞಿಕವಿಧಿಯೇ ಧನ್ವಂತರಿ ಹೋಮ.

ಎಪ್ಪತ್ತಕ್ಕೂ ಹೆಚ್ಚು ಮಂತ್ರಗಳನ್ನು ಹೇಳಿದ ಆಚಾರ್ಯ ಮಧ್ವರು ಕೊನೆಯದಾಗಿ ಧನ್ವಂತರಿ ಮಂತ್ರವನ್ನು ಹೇಳುತ್ತಾ ಒಂದು ಮಾತು ಆಡಿದ್ದಾರೆ.

**ಧಾನ್ವಂತರೋ ಮಹಾಮಂತ್ರಃ ಸಂಸೃತಿವ್ಯಾಧಿನಾಶನಃ ।**
**ಅತ್ರೋಕ್ತಸರ್ವಮಂತ್ರಾಣಾಂ ನಾಯಕೋಪಲಸನ್ನಿಭಃ ॥**

ಈ ಧನ್ವಂತರಿ ಮಹಾಮಂತ್ರವು ರೋಗನಾಶಕ, ಮೋಕ್ಷಪ್ರದ. ಇಲ್ಲಿ ನಿರೂಪಿಸಿದ ಎಲ್ಲಾ ಮಂತ್ರಗಳಿಗೂ ಮಿಗಿಲಾದ ಶ್ರೇಷ್ಠ ಮಂತ್ರ. ಮಣಿಸರದಲ್ಲಿ ಮಧ್ಯದ ನಾಯಕ ಮಣಿ(ಹವಳಮಣಿ)ಯಂತೆ 72 ಮಂತ್ರಗಳ ಈ ಮಂತ್ರಹಾರದಲ್ಲಿ ನಾಯಕಮಣಿಯಿದು.

ಧನ್ವಂತರಿಮಂತ್ರದಿಂದ ಆಯುಷ್ಯಹೋಮ ಮಾಡಬಹುದು. ಅಭಿಚಾರ ಶಾಂತಿಹೋಮವನ್ನು ಮಾಡಬಹುದು. ರೋಗ ನಿವೃತ್ತಿಗಾಗಿ ಧನ್ವಂತರಿ ಹೋಮವಂತೂ ಪ್ರಸಿದ್ಧವೇ ಇದೆ. ಆದರೆ ಉದ್ದೇಶ ಬದಲಾದಂತೆ ದ್ರವ್ಯವು ಬದಲಾಗುತ್ತದೆ.

**ಅಯುತಾಮೃತಸಮಿದ್ಧೋಮಾತ್ ಗೋಘೃತಕ್ಷೀರ ಸಂಯುತಾತ್।**
**ಸರ್ವೇ ರೋಗಾ ವಿನಶ್ಯಂತಿ ವಿಮುಖೋ ನ ಹರೇರ್ಯದಿ ॥**

**(ತಂತ್ರಸಾರ ಸಂಗ್ರಹ 4 – 199)**

ಗೋಘೃತ ಹಾಗೂ ಗೋಕ್ಷೀರದಿಂದ ಒದ್ದೆಯಾದ ಅಮೃತ ಬಳ್ಳಿಯಿಂದ 10,000 ಬಾರಿ ಧನ್ವಂತರಿ ಮಂತ್ರದಿಂದ ಆಹುತಿಯನ್ನು ಕೊಡಬೇಕು. ಹರಿಯಲ್ಲಿ ಭಕ್ತಿಯಿಂದ ಶ್ರದ್ಧಾ ಪೂರ್ವಕವಾಗಿ ಈ ಅಮೃತವಲ್ಲಿಯ ಹೋಮವನ್ನು ಮಾಡಿದಲ್ಲಿ ಸರ್ವರೋಗವೂ ನಿವೃತ್ತಿಯಾಗುತ್ತದೆ. ಅಮೃತಬಳ್ಳಿ ನಾಲ್ಕು ಅಂಗುಲದಷ್ಟು ಉದ್ದವಿರಬೇಕು.

**ಅಮೃತಾ ಸಮಿಧೋ ಜ್ಞೇಯಾಃ ಸರ್ವತ್ರ ಚತುರಂಗುಲಾಃ** (ತಂತ್ರಸಾರ 2-25) ಎಂಬ ಆಚಾರ್ಯರ ಮಾತು ಇದಕ್ಕೆ ಪ್ರಮಾಣ. ಎಲ್ಲಾ ಸಮಿಧೆಗಳೂ ಪ್ರಾದೇಶ ಮಾತ್ರ(ಗೇಣುದ್ದ)ವಿರಬೇಕೆಂದು ಅಂದರೆ 8ರಿಂದ 12 ಅಂಗುಲ ಇರಬೇಕೆಂಬ ಪ್ರಮಾಣವಿದ್ದರೂ ಅಮೃತಬಳ್ಳಿ ಮಾತ್ರ ಅಷ್ಟು ಉದ್ದವಿರಬಾರದು. ಮುಷ್ಟಿಯಲ್ಲಿ ಹಿಡಿಯಲು ಅನುಗುಣವಾಗುವಷ್ಟೇ ಉದ್ದವಿರಬೇಕು. ಇದನ್ನು ಕ್ಷೀರಾಜ್ಯಗಳಲ್ಲಿ ಮುಳುಗಿಸಿ ಒದ್ದೆಯಾದ ಸಮಿತ್ತನ್ನು ಭಕ್ತಿಯಿಂದ ಮಂತ್ರವನ್ನು ಉಚ್ಚರಿಸಿ ಸ್ವಾಹಾಕಾರವನ್ನು ಹೇಳುತ್ತಾ ಹೋಮಿಸಬೇಕು. **'ಧನ್ವಂತರಿರೂಪಿಪರಮಾತ್ಮನ ಇದಂ ನ ಮಮ'** ಎಂದು ತ್ಯಾಗ ಮಾಡಬೇಕು.

ಭೂತಶಾಂತಿ ಹಾಗೂ ಅಭಿಚಾರಶಾಂತಿಗಾಗಿಯೂ ಧನ್ವಂತರಿ ಹೋಮವು ವಿಹಿತವಾಗಿದೆ.

**ಭೂತಾಭಿಚಾರ ಶಾಂತ್ಯರ್ಥಂ ಅಪಾಮಾರ್ಗಾಹುತಿಕ್ರಿಯಾ ।**
**ದ್ವಿಗುಣಾಮೃತಯಾ ಪಶ್ಚಾತ್ ಕೇವಲೇನ ಘೃತೇನ ವಾ ॥**

ಭೂತ ಮೊದಲಾದ ದುಷ್ಟಗ್ರಹಗಳು ಶರೀರದಲ್ಲಿ ಆವೇಶಗೊಂಡಾಗ ಅದನ್ನು ಓಡಿಸುವುದಕ್ಕಾಗಿ **ಅಪಾಮಾರ್ಗ** ಸಮಿತ್ತಿನಿಂದ (ಉತ್ತರಣೆ ಕಡ್ಡಿಯಿಂದ) ಹೋಮಿಸಬೇಕು. ದ್ವೇಷಾಸೂಯೆಗಳಿಂದ ಪರರು ಮಾಡುವ ಮಾರಣ-ಸ್ತಂಭನಾದಿಗಳಿಗೆ ಅಭಿಚಾರವೆಂದು ಹೆಸರು. ಅಭಿಚಾರದೋಷದ ಶಾಂತಿಗಾಗಿಯೂ ಈ **ಅಪಾಮಾರ್ಗಾಹುತಿ** ಕ್ರಿಯೆಯು ವಿಹಿತವಾಗಿದೆ. ಈ ಭೂತಾಭಿಚಾರ ಶಾಂತಿಗಳು ಯಾಜ್ಞಿಕ ವಿಧಿಯಲ್ಲಿ 'ಘೋರ

ಕರ್ಮ'ವೆನಿಸಿಕೊಳ್ಳುತ್ತವೆ. ಆದ್ದರಿಂದ **ಅಪಾಮಾರ್ಗಾಹುತಿ** ಕೊಟ್ಟ ಮೇಲೆ ತನ್ನ ರಕ್ಷೆಗಾಗಿ ಮತ್ತು ಪುಷ್ಟಿಗಾಗಿ ಎರಡು ಪಟ್ಟು ಕ್ಷೀರಾಜ್ಯಯುಕ್ತ ಅಮೃತವಲ್ಲಿಯಿಂದ ಅಥವಾ ಕೇವಲ ಘೃತದಿಂದ ಧನ್ವಂತರಿಗೆ ಆಹುತಿ ನೀಡಬೇಕು. **ಅಪಾಮಾರ್ಗದಿಂದ** 108 ಆಹುತಿಯನ್ನಿತ್ತರೆ ಅಮೃತವಲ್ಲಿಯಿಂದ 216 ಆಹುತಿ. 1,000 ಆಹುತಿಯನ್ನಿತ್ತರೆ 2,000 ಆಹುತಿ ನೀಡಬೇಕು.

ಹೋಮಕ್ಕಾಗಿ ಗರಿಕೆಯನ್ನು ಉಪಯೋಗಿಸಿದಾಗ ಈ ಧನ್ವಂತರಿ ಹೋಮವೇ ಆಯುಷ್ಯ ಹೋಮವೆನಿಸುತ್ತದೆ. ಆಯುಷ್ಯವೃದ್ಧಿಗಾಗಿ ಈ ದೂರ್ವಾಹೋಮವನ್ನು ನಿತ್ಯವೂ ಮಾಡಬಹುದು. ವಾರ್ಷಿಕವಾಗಿ ತನ್ನ ಜನ್ಮನಕ್ಷತ್ರದ ದಿನವಾದರೂ ಈ ದೂರ್ವಾಯುಷ್ಯ ಹೋಮವನ್ನು ಮಾಡುವುದು ಉಚಿತ. ಒಂದು ಆಹುತಿಗೆ 4 ಗರಿಕೆ. ಹಾಲು, ತುಪ್ಪಗಳಲ್ಲಿ ಅದ್ದಿದ 4-4 ಗರಿಕೆ ತುದಿಗಳನ್ನು ಧನ್ವಂತರಿ ಮಂತ್ರದಿಂದ ಹೋಮಿಸಬೇಕು.

**ಆಯುರ್ವಿವೃದ್ಧಯೇ ನಿತ್ಯಂ ಜನ್ಮನಕ್ಷತ್ರ ಏವ ವಾ ।**
**ಚತುಶ್ಚತುರ್ಭಿರ್ದೂರ್ವಾಭಿಃ ಕ್ಷೀರಾಜ್ಯಾಕ್ತಾಭಿರಿಷ್ಯತೇ ॥**

**(ತಂತ್ರಸಾರ ಸಂ 4-101)**

ಆಹುತಿಯೊಂದಕ್ಕೆ ನಾಲ್ಕು ಸಂಖ್ಯೆಯ ಕ್ಷೀರಾಜ್ಯಾಕ್ತವಾದ ದೂರ್ವೆಯನ್ನು ಇಲ್ಲಿ ಆಚಾರ್ಯರು ಹೇಳಿದ್ದಾರೆ. 'ದಧಿಮಧ್ವಾಜ್ಯಸಂಯುಕ್ತೈಶ್ಚತು-ರ್ದೂರ್ವಾಂಕುರೈಃ ಶುಭೈಃ' ಎಂಬ ವಚನಾಂತರದಂತೆ ದಧಿ-ಮಧು-ಆಜ್ಯಗಳನ್ನು ಒಟ್ಟು ಸೇರಿಸಿದ ತ್ರಿಮಧುರದಲ್ಲಿ ಅದ್ದಿ ನಾಲ್ಕು ದೂರ್ವೆ ಗಳನ್ನು ಹೋಮಿಸುವ ಕ್ರಮ ಹೆಚ್ಚು ಚಾಲ್ತಿಯಲ್ಲಿದೆ. ಒಟ್ಟಿನಲ್ಲಿ ಅಮೃತವಲ್ಲಿಯಾದರೆ ಒಂದು ಆಹುತಿಗೆ ನಾಲ್ಕು ಅಂಗುಲವಿರಬೇಕು. ಗರಿಕೆಯಾದರೆ ನಾಲ್ಕು ಸಂಖ್ಯೆಯ ತುದಿ ಗರಿಕೆಯಿರಬೇಕು.

ಋಗ್ವೇದದಲ್ಲಿ **'ಅಯಂ ಮೇ ಹಸ್ತಃ'** ಎಂಬ ಅನುಷ್ಟುಪ್ ಛಂದಸ್ಸಿನ ಮಂತ್ರವು ಧಾನ್ವಂತರ ಋಙ್ಮಂತ್ರವೆನಿಸಿದೆ. ಈ ಮಂತ್ರದಿಂದ ತುಪ್ಪವನ್ನು ಹೋಮಿಸುವುದೂ ರೋಗನಾಶಕ ಹಾಗು ಆಯುಷ್ಯವರ್ಧಕ. ಹೀಗೆ

ಧನ್ವಂತರಿಹೋಮಕ್ಕೆ ನಾಲ್ಕು ದ್ರವ್ಯಗಳು. ಅಮೃತವಲ್ಲಿ, ಉತ್ತರಾಣಿ ಕಡ್ಡಿ, ಗರಿಕೆ ಹಾಗೂ ಆಜ್ಯ. ದ್ರವ್ಯ ವ್ಯತ್ಯಾಸದಿಂದ ಧನ್ವಂತರಿ ಹೋಮವೂ ನಾಲ್ಕು ಬಗೆ. ರೋಗ ನಿವೃತ್ತಿಗಾಗಿ ಗುಲೂಚೀ ಹೋಮ. ಅಭಿಚಾರ ಶಾಂತಿಗಾಗಿ ಅಪಾಮಾರ್ಗಹೋಮ. ಆಯುಷ್ಯವೃದ್ಧಿಗಾಗಿ ದೂರ್ವಾಹೋಮ ಹಾಗೂ ಋಙ್ಮಂತ್ರದಿಂದ ಆಜ್ಯಹೋಮ. ಒಂದೇ ಹೋಮತಂತ್ರದಲ್ಲಿ ಈ ನಾಲ್ಕೂ ದ್ರವ್ಯಗಳಿಂದ ಹೋಮಿಸುವ ಸಮಾನ ತಂತ್ರವಿಧಿಯೂ ಇದೆ. ಆದರೆ ಅಪಾಮಾರ್ಗದಿಂದ ಹೋಮಿಸಿದ ತರುವಾಯ ಎರಡು ಪಟ್ಟು ಸಂಖ್ಯೆಯ ಗುಲೂಚೀ(ಅಮೃತವಲ್ಲಿ) ಹೋಮ ಅಥವಾ ಆಜ್ಯಹೋಮವನ್ನು ಮಾಡುವುದು ಅವಶ್ಯಕ.

ಈ ಎಲ್ಲಾ ಯಜ್ಞಕರ್ಮಾನುಷ್ಠಾನಗಳು ಫಲಕಾರಿಯಾಗಬೇಕಾದರೆ ಮುಖ್ಯ ಬೇಕಾದುದು ಹರಿಭಕ್ತಿ. **'ಯದಿ ಭಕ್ತಿ ನಮ್ರಃ' 'ವಿಮುಖೋ ನ ಹರೇರ್ಯದಿ'** ಎಂಬ ಆಚಾರ್ಯರ ಮಾತುಗಳಿಗೆ ಹೆಚ್ಚು ಒತ್ತಿದೆ. ಆದ್ದರಿಂದ ಆಚಾರ್ಯರು ಕೊನೆಗೆ ಹೇಳುವ ಮಾತಿದು –

**ಸರ್ವಕ್ರಿಯಾಃ ಹರೌ ಭಕ್ತೇ ಹರಿಭಕ್ತೈಃ ಸ್ವನುಷ್ಠಿತಾಃ ।**
**ಗುರುಭಕ್ತೈಃ ಸದಾಚಾರೈಃ ಫಲಂತ್ಯದ್ಧಾ ನ ಚಾನ್ಯಥಾ ॥**

ಯಜ್ಞ ಮಾಡಿಸುವ ಯಜಮಾನ ಹರಿಭಕ್ತನಾಗಿರಬೇಕು. ಮಾಡುವವರು ಹರಿಗುರುಭಕ್ತರಾಗಿದ್ದು ಸದಾಚಾರಿಗಳಾಗಿ ಸರಿಯಾಗಿ ಅನುಷ್ಠಾನ ಮಾಡಿದರೆ ನಿಶ್ಚಿತವಾಗಿಯೂ ಫಲವು ದೊರೆಯುವುದು. ವಿಪರೀತವಾದರೆ ವಿಪರೀತ.

* * *

# ಸುಕೃತಹೋಮ

'ಪುರುಷಸೂಕ್ತ ಹಾಗೂ ಶ್ರೀಸೂಕ್ತ'ಗಳಿಂದ ಆಹುತಿನೀಡುವ ಹೋಮ ಸುಕೃತಹೋಮ.

ಸರ್ವವಾಙ್ಮಯದ ಮೂಲಬೀಜ ಓಂಕಾರ. ಅಕಾರ-ಉಕಾರ-ಮಕಾರಾತ್ಮಕವಾದ ಈ ಪ್ರಣವಮಂತ್ರದಲ್ಲಿ ಮೂರೂ ವೇದಗಳು ಹಾಸುಹೊಕ್ಕಿವೆ. ಹಾಗಾಗಿಯೇ ಈ ಪ್ರಣವಮಂತ್ರ ಮೂಲಮಂತ್ರವೆನಿಸಿದೆ.

ಮೂರು ಅಕ್ಷರದ ಪ್ರಣವ ಮಂತ್ರ ಮೂರು ವ್ಯಾಹೃತಿಮಂತ್ರವಾಗಿ ವಿಸ್ತಾರಗೊಂಡಿತು.

ಮೂರು ವ್ಯಾಹೃತಿಗಳ ವಿಸ್ತಾರವೇ ಮೂರುಪಾದದ ಗಾಯತ್ರೀ ಮಂತ್ರ.

ತ್ರಿಪದಾಗಾಯತ್ರಿಯು ಮೂರು ವರ್ಗಗಳುಳ್ಳ ಪುರುಷಸೂಕ್ತವಾಗಿ ವಿಸ್ತಾರಗೊಂಡಿತು.

ಋಗ್ವೇದದಲ್ಲಿ ಬರುವ ಪುರುಷಸೂಕ್ತದಲ್ಲಿ ಹದಿನಾರು ಮಂತ್ರಗಳಿವೆ. ಇವು ಐದು, ಐದು, ಆರು ಎಂಬ ಕ್ರಮದಿಂದ ಮೂರುವರ್ಗಗಳಾಗಿವೆ. ಈ ಮೂರು ವರ್ಗಗಳ ವಿಸ್ತಾರವೇ 'ತ್ರಯೀ' ಎನಿಸಿದ ವೇದಗಳು.

ಯಜುರ್ವೇದದ ಪುರುಷಸೂಕ್ತದಲ್ಲಿ ಹದಿನೆಂಟು ಮಂತ್ರಗಳು. ಇನ್ನೊಂದೆಡೆ ಇಪ್ಪತ್ತೊಂದು ಮಂತ್ರಗಳಿವೆ. ಸುಕೃತಹೋಮದಲ್ಲಿ ಋಗ್ವೇದದ ಪುರುಷಸೂಕ್ತದಿಂದ ಆಹುತಿಯನ್ನು ನೀಡಲಾಗುತ್ತದೆ.

ಅಷ್ಟಮಹಾಮಂತ್ರಗಳಲ್ಲಿ ಪುರುಷಸೂಕ್ತವೂ ಒಂದು ಮಂತ್ರ. ಭಗವಂತನ ವಿರಾಡ್ರೂಪವನ್ನು ವರ್ಣಿಸುತ್ತಾ ಈ ಸೂಕ್ತವು ಭಗವಂತನಿಂದ ಚತುರ್ಮುಖನ ಉತ್ಪತ್ತಿ, ಚತುರ್ಮುಖನಿಂದ ನಡೆದ ನಾನಾ ಬಗೆಯ ಸೃಷ್ಟಿ, ದೇವತೆಗಳು ನಡೆಸಿದ ಭಗವತ್ಪೂಜೆಯ ಬಗ್ಗೆ ವರ್ಣಿಸಿದೆ.

ಪುರುಷಸೂಕ್ತವು ಜಗದ ತಂದೆಯಾದ ಶ್ರೀಹರಿಯನ್ನು ಸ್ತುತಿಸಿದೆ. ಶ್ರೀಸೂಕ್ತವು ಜಗನ್ಮಾತೆಯಾದ ಲಕ್ಷ್ಮೀದೇವಿಯನ್ನು ಕೊಂಡಾಡಿದೆ. ಪುರುಷಸೂಕ್ತದಲ್ಲಿ ಹದಿನಾರು ಮಂತ್ರಗಳಿದ್ದರೆ ಶ್ರೀಸೂಕ್ತದಲ್ಲಿ ಹದಿನೈದು. "ಅಲಕ್ಷ್ಮೀಯನ್ನು ಓಡಿಸಿ ಸೌಭಾಗ್ಯದೇವತೆಯಾದ ನೀನು ನನ್ನ ಸದನದಲ್ಲಿ ನೆಲೆಗೊಳ್ಳು, ಭಗವಂತನ ಸನಿಹಕ್ಕೆ ನನ್ನನ್ನು ಕರೆದೊಯ್ಯು" ಎಂಬ ಪ್ರಾರ್ಥನೆ ಶ್ರೀಸೂಕ್ತದಲ್ಲಿದೆ.

ವೇದವಾಙ್ಮಯವೆಂಬ ವಿಶಾಲಾಗಸದಲ್ಲಿ ಸೂರ್ಯ–ಚಂದ್ರರಂತೆ ಕಂಗೊಳಿಸುವ ಎರಡು ಸೂಕ್ತಗಳು ಪುರುಷಸೂಕ್ತ–ಶ್ರೀಸೂಕ್ತಗಳು. ಇವುಗಳಿಂದ ಜಗದ ತಂದೆ–ತಾಯಿಯರನ್ನು ಸ್ತುತಿಸುವವ ಧನ್ಯ. ಅರ್ಚಿಸುವವ ಕೃತಾರ್ಥ. ಹೋಮಿಸುವವ ಸುಕೃತಿ. ಆದ್ದರಿಂದಲೇ ಪರಮಸುಕೃತ(ಪುಣ್ಯ)ವನ್ನು ತಂದುಕೊಡುವ ಪುರುಷಸೂಕ್ತ–ಶ್ರೀಸೂಕ್ತ ಹೋಮವು 'ಸುಕೃತಹೋಮ' ಎಂದೇ ಕರೆಸಿಕೊಂಡಿದೆ.

ಈ ಹೋಮದಲ್ಲಿ ಪುರುಷಸೂಕ್ತದ ಹದಿನಾರು ಮಂತ್ರಗಳಿಂದ ಹದಿನಾರು ಬಾರಿ(ಒಟ್ಟು 256) ಆಜ್ಯಾಹುತಿಯನ್ನಿತ್ತು ಶ್ರೀಸೂಕ್ತದ ಹದಿನೈದು ಮಂತ್ರಗಳಿಂದ ಹದಿನೈದು ಬಾರಿ(ಒಟ್ಟು 225) ಆಜ್ಯಾಹುತಿ ಯನ್ನು ನೀಡಲಾಗುತ್ತದೆ.

ನಿಷ್ಕಾಮನೆಯಿಂದ ಭಗವತ್ಪ್ರೀತಿಗಾಗಿ ಈ ಹೋಮವನ್ನು ಆಚರಿಸುತ್ತಾರೆ. ಕೆಲವೊಮ್ಮೆ ವಿವಾಹಾದಿ ಭಾಗ್ಯಸಿದ್ಧಿಗಾಗಿ, ಪ್ರೇತಮೋಕ್ಷಕ್ಕಾಗಿ, ಪ್ರಾಯಶ್ಚಿತ್ತಕ್ಕಾಗಿಯೂ ಸುಕೃತಹೋಮವನ್ನು ನಡೆಸುವುದಿದೆ.

* * *

# ಧಾತ್ರೀಹವನ

ಚಾತುರ್ಮಾಸ್ಯವ್ರತಾನುಷ್ಠಾನದ ಕೊನೆಯಲ್ಲಿ ಆಚರಿಸುವ ಹೋಮ ಧಾತ್ರೀಹವನ. ಇದನ್ನೇ ವನಭೋಜನವೆನ್ನುತ್ತಾರೆ.

ದಕ್ಷಿಣಾಯನದಲ್ಲಿ ಉದ್ಭವಿಸಿದ ನೆಲ್ಲಿ-ಹುಣಿಸೆ ಮುಂತಾದವು ಸ್ವೀಕಾರಾರ್ಹವಾಗಬೇಕಾದರೆ ಧಾತ್ರಿಹವನವನ್ನು ನಡೆಸಬೇಕು. ಉತ್ತರಾಯಣದಲ್ಲಿ ಹುಟ್ಟಿದ ವಸ್ತುಗಳಿಗೆ ಆಗ್ರಯಣೇಷ್ಟಿಯಿಂದ ಶುದ್ಧಿ. ಈ ಆಗ್ರಯಣೇಷ್ಟಿಯನ್ನು ಅಗ್ನಿಹೋತ್ರಿಗಳು ಮಾತ್ರ ನಡೆಸುತ್ತಾರೆ.

**ಉತ್ತರಾಯಣಜಂ ಚಾನ್ನಂ ಶುದ್ಧಮಾಗ್ರಯಣೇಷ್ಟಿತಃ ।**
**ದಕ್ಷಿಣಾಯನಜಂ ಚಾನ್ನಂ ಕಾರ್ತಿಕೇ ವನಭೋಜನಾತ್ ॥**

**(ಕೃಷ್ಣಾಚಾರ್ಯಸ್ಮೃತಿಮುಕ್ತಾವಲೀ)**

ಉತ್ಥಾನದ್ವಾದಶಿಯಂದು ಚಾತುರ್ಮಾಸ್ಯವ್ರತವು ಸಮಾಪ್ತಿಗೊಂಡಿದೆ. ಹಾಗಿದ್ದರೂ ನೆಲ್ಲಿ-ಹುಣಿಸೇಹಣ್ಣು ಮೊದಲಾದ ನವಫಲಗಳನ್ನು ಸದಾಚಾರಶೀಲರು ಉಪಯೋಗಿಸುವುದಿಲ್ಲ. ಮುಂದಿನ ಐದಾರು ದಿನಗಳೊಳಗಾಗಿ ಧಾತ್ರೀಹವನದೊಂದಿಗೆ ವನಭೋಜನವನ್ನು ಆಚರಿಸಿ ಸ್ವೀಕರಿಸುತ್ತಾರೆ.

ಧಾತ್ರೀ ಎಂದರೆ ನೆಲ್ಲಿ. ನೆಲ್ಲಿಯ ಬುಡದಲ್ಲಿ ಆಚರಿಸುವ ಹವನ ಧಾತ್ರೀಹವನ.

ಕಾರ್ತಿಕಮಾಸದ ಶುಕ್ಲತ್ರಯೋದಶಿಯಿಂದ ಆರಂಭಿಸಿ ಪಂಚಮೀ ತನಕದ ಯಾವುದೇ ದಿನದಂದು (ದಶಮಿಯ ತನಕವೂ ಆಗಬಹುದು) ಧಾತ್ರೀಹವನವನ್ನು ನಡೆಸಬಹುದು.

ಆದರೆ ಸೂರ್ಯಸಂಬಂಧಿಯಾದ ಭಾನುವಾರ, ಸಪ್ತಮೀತಿಥಿ ಗಳಂದು ಧಾತ್ರೀ ಭಕ್ಷಣವು ನಿಷಿದ್ಧವಾದ್ದರಿಂದ ಈ ಎರಡುದಿನ ಧಾತ್ರೀ ಹವನವೂ ನಿಷಿದ್ಧ.

'ಭಾನುಂ ಭೌಮಂ ಪರಿತ್ಯಜ್ಯ ಭೃಗುವಾಸರಮೇವ ಚ' ಎಂಬ ವಾಕ್ಯದಿಂದ ಕೆಲವರು ಮಂಗಳವಾರ, ಶುಕ್ರವಾರಗಳಲ್ಲೂ ವನಭೋಜನವನ್ನು ಮಾಡುವುದಿಲ್ಲ.

ಧಾತ್ರೀಹವನವನ್ನು ಪ್ರತಿಯೊಬ್ಬರೂ ಆಚರಿಸಬೇಕಿಲ್ಲ. ಧಾತ್ರೀಹವನ ನಡೆದಲ್ಲಿ ಹೋಗಿ ವನಭೋಜನದಲ್ಲಿ ಭಾಗವಹಿಸಿದರೆ ಸಾಕು. ಅವನು ನೆಲ್ಲಿ ಮೊದಲಾದ ನವಫಲಗಳನ್ನೂ, ನವಧಾನ್ಯಗಳನ್ನೂ ಸ್ವೀಕರಿಸಲು ಅರ್ಹನಾಗುತ್ತಾನೆ.

**ವನಭೋಜನಕ್ರಮ:**

ಊರಿನ ಜನರೆಲ್ಲ ಸೇರಿಕೊಂಡು ಹೋಮದ್ರವ್ಯಗಳೊಡನೆ ನೆಲ್ಲಿ ವೃಕ್ಷವಿರುವ ಪ್ರದೇಶಕ್ಕೆ ಹೋಗಬೇಕು. ನೆಲ್ಲಿಯ ಸುತ್ತಮುತ್ತಲ ಪ್ರದೇಶದಲ್ಲಿ ಗಿಡಮರಗಳಿಗೆ ತೊಂದರೆಯಾಗದಂತೆ ವನಪ್ರದೇಶವನ್ನು ಸ್ವಚ್ಛಗೊಳಿಸಿ ಅಲ್ಲಿ ಅಡಿಗೆ ಮಾಡಬೇಕು. ಇಂದಿನ ಪಾಕದಲ್ಲಿ ಹೊಸನೆಲ್ಲಿ–ಹೊಸಹುಣಿಸೆ ಗಳನ್ನು ಅವಶ್ಯ ಉಪಯೋಗಿಸಬೇಕು.

ನೆಲ್ಲಿ ಬುಡದಲ್ಲಿ ಹೋಮವನ್ನು ನಡೆಸಬೇಕು. ಧಾತ್ರೀ, ಶಾಂತಿ, ಕಾಂತಿ ಮೊದಲಾದ ನಾಮಗಳಿಂದ ಪ್ರಕೃತಿದೇವತೆಯಾದ ಲಕ್ಷ್ಮೀದೇವಿಗೆ ಇಲ್ಲಿ ಪಾಯಸಾಹುತಿಯಿದೆ. ರಕ್ಷಾಮಂತ್ರಗಳಿಂದ ಲಕ್ಷ್ಮೀನರಸಿಂಹನಿಗೆ ಬೆಲ್ಲದ ಅಪೂಪದಿಂದ ಮಿಲಿತವಾದ ತೊವ್ವೆಯಿಂದ ಆಹುತಿಯಿದೆ.

ಹೋಮಾಂತ್ಯದಲ್ಲಿ ನೆಲ್ಲಿಗಿಡದ ಸುತ್ತಲೂ ಗುಡಸೂಪಾನ್ನದಿಂದ ಬಲಿಪ್ರದಾನವಿದೆ. ಈ ಬಲಿಪ್ರದಾನಕಾಲದಲ್ಲಿ ಎಲ್ಲರೂ ನೆಲ್ಲಿಗೆ ಪ್ರದಕ್ಷಿಣೆ ಬಂದು ನಮಸ್ಕರಿಸುತ್ತಾರೆ. ಈಗಿನ ಪ್ರದಕ್ಷಿಣೆಗೆ ವಿಷ್ಣುಸಾಯುಜ್ಯ ಫಲ.

**ಧಾತ್ರೀಹವನದ ದರ್ಶನ ಮಾತ್ರದಿಂದಲೂ ವಿಷ್ಣುಸಾಯುಜ್ಯ.**
**ಬಲಿಪ್ರದಾನಕಾಲೇತು ಯೇ ಕುರ್ವಂತಿ ಪ್ರದಕ್ಷಿಣಮ್ ।**
**ತೇ ಯಾಂತಿ ವಿಷ್ಣುಸಾಯುಜ್ಯಂ ಪಿತೃಭಿಃ ಸಾರ್ಧಮೇವ ಚ ॥**

ಧಾತ್ರೀಹವನವನ್ನು ಮುಗಿಸಿ ವಿಪ್ರ-ಬಂಧು-ಪರಿವಾರದೊಂದಿಗೆ ಧಾತ್ರೀಸನ್ನಿಧಿಯಲ್ಲೇ ಭುಂಜಿಸಬೇಕು. ಇದೇ ವನಭೋಜನ. ಇದಕ್ಕೆ ವಾಜಪೇಯದ ಅಶ್ವಮೇಧದ ಫಲವನ್ನು ಪಂಚರಾತ್ರ ತಿಳಿಸಿದೆ.

**ಅಶ್ವಮೇಧಸಹಸ್ರೇಷು ವಾಜಪೇಯಶತೇಷು ಚ ।**
**ತತ್ಫಲಂ ಸಮವಾಪ್ನೋತಿ ಕಾರ್ತಿಕೇ ವನಭೋಜನಾತ್ ॥**

* * *

# ಆಶ್ಲೇಷಾಬಲಿ

ಆಶ್ಲೇಷೆ ಎಂದರೆ ಆಲಿಂಗನ. ಇದು ಸಂತಾನಪ್ರದ ಸರ್ಪಗಳನ್ನು ಸಂಕೇತಿಸುತ್ತದೆ. ಒಂಭತ್ತನೆಯ ನಕ್ಷತ್ರವಾದ ಆಶ್ಲೇಷಾ ನಕ್ಷತ್ರಕ್ಕೆ ನಿಯಾಮಕ ದೇವತೆಗಳು ಸರ್ಪಗಳು. ಆಶ್ಲೇಷಾ ಅಥವಾ ಆಶ್ರೇಷಾ ಎಂಬುದು ಸರ್ಪಗಳ ಹೆಸರಾಗಿಯೂ ಉಲ್ಲಿಖಿತವಾಗಿದೆ. ಸರ್ಪಗಳನ್ನು ಉದ್ದೇಶಿಸಿ ಬಲಿ–ಪೂಜೆಗಳನ್ನು ನಡೆಸುವ ವಿಧಿಗೆ ಆಶ್ಲೇಷಾಬಲಿಯೆಂದು ಹೆಸರು.

ಜನಮೇಜಯನ ಸರ್ಪಯಾಗಾನಂತರ ಉಳಿದುಕೊಂಡ ಎಂಭತ್ತು ವಿಶಿಷ್ಟಸರ್ಪಗಳನ್ನು ಮಹಾಭಾರತ ಹೆಸರಿಸಿದೆ. ಶೇಷ, ವಾಸುಕಿ ಮೊದಲಾದ ಅಷ್ಟಪ್ರಧಾನರನ್ನು ಅನೇಕ ಪುರಾಣಗಳು ಉಲ್ಲೇಖಿಸಿವೆ. ಈ ಎಂಟು ಮಂದಿಯಲ್ಲೂ ಶ್ರೇಷ್ಠ ಶೇಷ. ಈತ ಭಗವಂತನ ಹಾಸುಗೆ, ಭೂಮಿಧಾರಕನಾಗಿ ಭೂಧರನೆನಿಸಿದವ. ಅನಂತಹೆಡೆಗಳಿಂದ 'ಅನಂತ' ಎಂದೂ ಇವನಿಗೆ ಹೆಸರು. ಇವನಲ್ಲಿದ್ದು ಪೂಜೆ ಸ್ವೀಕರಿಸುವವ ಸಂಕರ್ಷಣರೂಪಿಯಾದ ಭಗವಂತ.

**ಸಂಕರ್ಷಣಾತ್ಮಾ ಸರ್ಪೇಷು ಸ್ಥಿತ್ವಾ ತುಷ್ಟೋ ವರಪ್ರದಃ ।**

ಸಂತಾನಪ್ರದ ಲಿಂಗದೇವತೆಯಾದ ರುದ್ರನೇ ಮುಂದೆ ಶೇಷನಾಗುವವ. ರುದ್ರದೇವ ನಾಗಭೂಷಣ. ಶೇಷನೇ ಇವನಿಗೆ ಯಜ್ಞೋಪವೀತ. ಪದ್ಮ–ಶಂಖಪಾಲರು ಶಿವನಿಗೆ ಕರ್ಣಾಭರಣರು. ತೋಳ್ಬಂದಿಗಳಾಗಿ ವಾಸುಕಿ–ಕುಲಿಕರು ಶಿವನನ್ನು ಸೇವಿಸಿದ್ದಾರೆ. ಕರಕಂಕಣಗಳಾಗಿ ತಕ್ಷಕ–ಮಹಾಪದ್ಮರು.

ಸೊಂಟದ ಪಟ್ಟಿಯಾಗಿ ಕರ್ಕೋಟಕನಾಗನಿದ್ದಾನೆ. ಹೀಗೆ ಶೇಷನೊಂದಿಗೆ ವಾಸುಕಿ, ತಕ್ಷಕ, ಕರ್ಕೋಟಕ, ಪದ್ಮ, ಮಹಾಪದ್ಮ, ಶಂಖಪಾಲ, ಕುಲಿಕ ಎಂಬ ನಾಗಗಳು ಶಿವಸೇವೆಯಲ್ಲಿ ನಿರತವಾಗಿವೆ. ಈ ಶಿವಸೇವೆಯ ಬಲದಿಂದಲೇ ಶಿವಸಮನಾದ ಶೇಷನೊಂದಿಗೆ ಪೂಜೆಯನ್ನು ಪಡೆಯುತ್ತಿವೆ.

ಈ ಅಷ್ಟಕುಲನಾಗಗಳಿಗೂ ಎಂಭತ್ತು ಸರ್ಪಗಳಿಗೂ ಅನ್ನಾಪೂಪ ಲಾಜಾದಿಗಳಿಂದ ಬಲಿಯನ್ನು ನೀಡುವ ಆರಾಧನವಿಧಿಯನ್ನು ಆಶ್ಲೇಷಾಬಲಿ ಅಥವಾ ಆಶ್ಲೇಷಾನಕ್ಷತ್ರ ನಿಯಾಮಕ ಸರ್ಪಬಲಿ ಎಂದು ಕರೆಯಲಾಗಿದೆ. ಇದಕ್ಕಾಗಿ ವಿಶಿಷ್ಟಮಂಡಲವನ್ನು ಬರೆದು ಪಂಚವರ್ಣ ಗಳಿಂದ ಸುತ್ತಲೂ ಸರ್ಪಾಕಾರವನ್ನು ಬರೆದು ತೆರೆದ ಹೆಡೆಯನ್ನು ಉಬ್ಬಿಸಿ ವಿಜೃಂಭಿಸಲಾಗುತ್ತದೆ.

## ಸರ್ಪದೋಷಪರಿಹಾರ

ಮನುಷ್ಯನು ಪ್ರಕೃತಿಯ ಮೇಲೆ ನಡೆಸುವ ದುರಾಕ್ರಮಣವು ಸರ್ಪದೋಷವಾಗಿ ಕಾಡುತ್ತದೆ. ಸರ್ಪಾಂಡವನ್ನು ಒಡೆಯುವುದು, ಹುತ್ತ ಗಳನ್ನು ಪುಡಿಗುಟ್ಟುವುದು, ಕಾಡುಕತ್ತರಿಸುವುದು. ಸರ್ಪಕೇಲಿಯನ್ನು ನೋಡುತ್ತಾ ನಿಲ್ಲುವುದು, ಸರ್ಪಗಳನ್ನು ಹಿಂಸಿಸುವುದು ಮುಂತಾದವು ಅಪರಾಧಗಳು. ಇವಲ್ಲದೇ ವಿಪ್ರಹಿಂಸನ, ಭ್ರೂಣಹತ್ಯೆ, ವಟ್ವಂಗಚ್ಛೇದನಾದಿ ಗಳು ಸರ್ಪದೋಷಪ್ರದಗಳು. ಇಂತಹ ದೋಷಗಳು ಪಾಂಡುರೋಗ, ಕುಷ್ಠರೋಗ, ಸರ್ಪಸುತ್ತು ಮುಂತಾದ ರೋಗಗಳಿಗೆ ಕಾರಣವಾಗುತ್ತವೆ. ಸಂತಾನಪ್ರತಿಬಂಧ, ಗರ್ಭಪಾತ, ಶಿಶುಮರಣ, ಸಂತತಿಯಲ್ಲಿ ವಿಕಲಾಂಗತೆ ಇಂಥವುಗಳೂ ಸರ್ಪದೋಷದ ಫಲವೆನಿಸುತ್ತವೆ.

ಸರ್ಪದೋಷದ ಇರವು ಜಾತಕದಲ್ಲಿ ರಾಹುಗ್ರಹದಿಂದ ವ್ಯಕ್ತವಾಗುತ್ತದೆ. ಈ ಸಮಯದಲ್ಲಿ ಜ್ಯೋತಿಷ್ಕರು ಸರ್ಪಸಂಸ್ಕಾರ, ಆಶ್ಲೇಷಾಬಲಿ, ನಾಗಪ್ರತಿಷ್ಠೆ ಮುಂತಾದ ಪರಿಹಾರವಿಧಿಗಳನ್ನು ಸೂಚಿಸುತ್ತಾರೆ. ಇಲ್ಲಿ ನಡೆಸುವ ಹೋಮದಲ್ಲಿ ಸರ್ಪಸಂಬಂಧಿ ಮಂತ್ರಗಳಿಂದ ಸಂಕರ್ಷಣನಿಗೆ ಆಹುತಿಯನ್ನು ನೀಡಲಾಗುತ್ತದೆ.

ಕುಕ್ಕೆಸುಬ್ರಹ್ಮಣ್ಯ ಮುಂತಾದ ಕ್ಷೇತ್ರಗಳಲ್ಲಿ ಈ ವಿಧಿಗಳು ಹೆಚ್ಚಾಗಿ ನಡೆಯುತ್ತವೆ. ಈ ಕಾರಣದಿಂದ ಸುಬ್ರಹ್ಮಣ್ಯನೆಂದರೆ ನಾಗನೆಂದು ಭ್ರಮಿಸಿ ನಾಗಗಳನ್ನು 'ಸುಬ್ಬರಾಯ' ಎಂದು ಕರೆಯುವವರೂ ಇದ್ದಾರೆ. ವಸ್ತುತಃ ಸುಬ್ರಹ್ಮಣ್ಯ ಬೇರೆ ನಾಗಗಳು ಬೇರೆ. ರುದ್ರದೇವನ ಮಗ ಕುಮಾರ ಕಾಮದೇವನ ಅವತಾರ. ಇವನೇ ಸುಬ್ರಹ್ಮಣ್ಯ. ಶೇಷದೇವ ರುದ್ರನಿಗೆ ಸಮನೆನಿಸಿದ ಅನಂತ. ಇವನು ಸುಬ್ರಹ್ಮಣ್ಯನಿಂದಲೂ ಆರಾಧ್ಯನಾಗಿದ್ದಾನೆ. ಶೇಷನ ತಮ್ಮನಾದ ವಾಸುಕಿಯೆಂಬ ನಾಗರಾಜನು ಕುಕ್ಕೆಸುಬ್ರಹ್ಮಣ್ಯದಲ್ಲಿ ಸುಬ್ರಹ್ಮಣ್ಯನ ಜೊತೆಗೇ ಪೂಜಿತನಾಗಿದ್ದಾನೆ. ಇದು ಈ ಕ್ಷೇತ್ರಕ್ಕೆ ಸಂಬಂಧಪಟ್ಟ ವಿಶೇಷಮಹಿಮೆ. ಸ್ಕಾಂದವಚನದಂತೆ

**ಸರ್ವೇ ಶೃಣ್ವಂತು ಮದ್ವಾಕ್ಯಂ ಋಷಯೋ ದೇವಮಾನವಾಃ ।**
**ವಾಸುಕಿರ್ವೋ ಮಯೂರಸ್ಥಃ ಪೂಜಾರ್ಹಃ ಸಂಭವೇತ್ ಸದಾ ॥**

ಕುಮಾರನೆನ್ನುತ್ತಾನೆ – ಋಷಿಗಳೇ, ದೇವತೆಗಳೇ, ಮಾನವರೇ ಎಲ್ಲರೂ ನನ್ನ ಮಾತನ್ನು ಕೇಳಿರಿ. ಈ ಕುಮಾರಧಾರೆಯ ತೀರದ ಮನೋರಮಪರಿಸರದಲ್ಲಿ ನನ್ನೊಂದಿಗೇ ಈ ವಾಸುಕೀನಾಗರಾಜನು ಮಯೂರದಲ್ಲಿ ಇದ್ದು ಪೂಜೆಗೊಳ್ಳುತ್ತಾನೆ. ಸದ್ಭಕ್ತರು ಧಾರಾನದಿಯಲ್ಲಿ ಮಿಂದು ವಾಸುಕೀಸಹಿತನಾದ ನನ್ನನ್ನು ಪೂಜಿಸಿ ಕ್ಷಿಪ್ರಸಿದ್ಧಿಯನ್ನು ಪಡೆಯುವಂತಾಗಲಿ. ಇದು ನನ್ನ ಶಾಸನ.

**ದೇವಾಶ್ಚ ಮನುಜಾಃ ಸಿದ್ಧಾಃ ಋಷಯಶ್ಚ ತಪೋಧನಾಃ ।**
**ಧಾರಾನದ್ಯಾಂ ಕೃತಸ್ನಾನಾಃ ಮಾಂ ಸಂಪೂಜ್ಯ ಸವಾಸುಕಿಮ್ ।**
**ಕ್ಷಿಪ್ರಸಿದ್ಧಿಂ ಲಭಂತ್ವತ್ರ ಸರ್ವೇಽಪಿ ಮಮ ಶಾಸನಾತ್ ॥**

ಈ ಮಾತುಗಳನ್ನು ಗಮನಿಸಿದಾಗ ಸುಬ್ರಹ್ಮಣ್ಯನೇ ವಾಸುಕಿಯಲ್ಲ ವೆಂದು ಸ್ಪಷ್ಟವಿದೆ. ಸುಬ್ರಹ್ಮಣ್ಯನ ಜೊತೆಗೇ ವಾಸುಕಿಯ ಪೂಜೆ ಈ ಕ್ಷೇತ್ರದಲ್ಲಿಯ ವೈಶಿಷ್ಟ್ಯ. ತಂದೆ–ಮಕ್ಕಳಿಗೆ ಜೊತೆಗೇ ಪೂಜೆ ನಡೆದಲ್ಲಿ ತಂದೆಯೇ ಮಗನಾಗುವುದಿಲ್ಲವಷ್ಟೇ!

ಆಶ್ಲೇಷಾಬಲಿಯಲ್ಲಿ ಹರಿದ್ರಾಮಿಶ್ರಿತಾನ್ನದಿಂದ ಪಿಂಡಗಳನ್ನು ಮಾಡಿ ಬಲಿಪ್ರದಾನ ಮಾಡಲಾಗುತ್ತದೆ. ಇದು ಜೀವತ್ಪಿತೃಕರು ಮಾಡಬಾರದ ಶ್ರಾದ್ಧದಂತಹ ಕೆಲಸವೆಂದು ಕೆಲವರು ಹೆದರಿಕೊಳ್ಳುವುದಿದೆ. ವಸ್ತುತಃ ಇದು ಪಿಂಡಗಳಲ್ಲ. ಅನ್ನದ ಲಿಂಗಾಕಾರದ ಉಂಡೆಗಳು. ಸರ್ಪದೋಷ ವುಳ್ಳವರೆಲ್ಲಾ ನಡೆಸಬಹುದಾದ ಬಲಿಪೂಜೆಯಿದು.

ಸರ್ಪಸಂಸ್ಥಿತಾದ ಸಂಕರ್ಷಣನನ್ನು ಸ್ಮರಿಸಿ ನಡೆಸುವ ನಾಗಾರಾಧನೆ ಫಲಪ್ರದವಾಗುತ್ತದೆ.

* * *

# ಮಹಾವಿಷ್ಣುಯಾಗ

ಎಲ್ಲೆಲ್ಲೂ ಇರುವವನು ವಿಷ್ಣು. "ವಿಷ್ಲ್ಯ ವ್ಯಾಪ್ತೌ" ಎಂಬ ಮೂಲ ಧಾತುವಿನಿಂದ ಈ ಶಬ್ದ ನಿಷ್ಪನ್ನವಾಗಿದೆ. ಸರ್ವವ್ಯಾಪ್ತನಾದ್ದರಿಂದಲೇ ಇವನು ಸರ್ವಾಂತರ್ಯಾಮಿ ಸರ್ವದೇವತೆಗಳ ಒಳಗಿದ್ದು ನಮ್ಮ ಅನ್ಯದೇವತಾ ಪೂಜೆಯನ್ನೂ ಸ್ವೀಕರಿಸುವವನೀತ. ನಮ್ಮ ಒಳಗಿದ್ದು ಪ್ರೇರಕನಾಗಿ ಹೊರಗೂ ಇದ್ದು ಧಾರಕನಾಗಿ ಉಪಕರಿಸಿ ಪಾಲಿಸುತ್ತಿರುವ ಆ ಸರ್ವವ್ಯಾಪ್ತನನ್ನು ನಿತ್ಯವೂ ಪೂಜಿಸಬೇಕು. ದೇವಪೂಜೆ, ಅನುಯಾಗ, ವೈಶ್ವದೇವ ಮೊದಲಾದ ಮಾಧ್ಯಮದಲ್ಲಿ ನಡೆಸುವ ಈ ಕರ್ತವ್ಯ ಕರ್ಮವೇ "ದೇವಯಜ್ಞ" ಎನಿಸಿದೆ.

ದೇವಯಜ್ಞದಲ್ಲಿ ನಾರಾಯಣಾಷ್ಟಾಕ್ಷರಾದಿ ವೈಷ್ಣವ ಮಂತ್ರಗಳಿಂದ ಹಾಗೂ ಪುರುಷಸೂಕ್ತದಿಂದ ಪ್ರತಿದಿನವೂ ಆಹುತಿಯನ್ನು ನೀಡಬೇಕು. ನವೀನ ಜೀವನ ಪದ್ಧತಿಯ ಅನಿವಾರ್ಯ ಸ್ಥಿತಿಯಲ್ಲಿ ಇವೆಲ್ಲಾ ಮೂಲೆ ಗುಂಪಾಗತೊಡಗಿವೆ. **ನಿತ್ಯಾನುಯಾಗವನ್ನು ನಡೆಸುವವರೂ ಎಂಟು ಆಹುತಿ ನೀಡಬೇಕಾದಲ್ಲಿ ಒಂದು ಆಹುತಿಯನ್ನಿತ್ತು ಮುಗಿಸಿಬಿಡುವುದುಂಟು. ಈ ಎಲ್ಲಾ ಲೋಪಗಳಿಂದ ಉಂಟಾದ ಹಾನಿಯನ್ನು ತುಂಬಿಸಿಕೊಳ್ಳುವುದಕ್ಕಾಗಿ ವಿಷ್ಣುಪ್ರಿಯಕರವಾದ "ಮಹಾವಿಷ್ಣುಯಾಗ" ಇದೆ.**

ವಿಷ್ಣುಯಾಗವು ಒಂದು ಥರದ ನಿಷ್ಕಾಮಕರ್ಮ. ವಿಷ್ಣುಪ್ರೀತಿ ಯೊಂದೇ ಇದರ ಉದ್ದೇಶ. ನಮ್ಮ ಬೇಕು-ಬೇಡಗಳನ್ನೆಲ್ಲಾ ಸೇರಿಸಿ ಉದ್ದದ ಸಂಕಲ್ಪವನ್ನು ಹೇಳುವ ಅವಶ್ಯಕತೆ ಇಲ್ಲಿಲ್ಲ. ಬಹುಶಃ ಅದಕ್ಕಾಗಿಯೋ

ಏನೋ? ಸರ್ವಶ್ರೇಷ್ಠವಾದ ಈ ಯಾಗ ಐಹಿಕಫಲವನ್ನು ಬಯಸುವ ನಮ್ಮಲ್ಲಿ ಹೆಚ್ಚು ಚಾಲ್ತಿಯಲ್ಲಿಲ್ಲ.

ಆದರೆ ಐಹಿಕಫಲವಿಲ್ಲದ ಕರ್ಮದಲ್ಲಿ ಕಲಿಯುಗದ ಮನುಜ ಪ್ರವೃತ್ತನಾಗಲಾರ! ಹಾಗಾಗಿಯೇ 'ವಿಷ್ಣೋಃ ಪ್ರೀತ್ಯರ್ಥಮೇವ' ಕೇವಲ ವಿಷ್ಣುಪ್ರೀತಿಗಾಗಿ ಈ ಯಾಗ ಎಂದು ಬಣ್ಣಿಸಿದ ಶ್ರೀಮದಾಚಾರ್ಯರೇ ತಮ್ಮ ತಂತ್ರಸಾರ ಸಂಗ್ರಹದಲ್ಲಿ ವಿಷ್ಣುಯಾಗಕ್ಕೆ ಆರೇಳು ಐಹಿಕಫಲಗಳನ್ನೂ ಹೇಳಿದ್ದಾರೆ.

**ಉಪಸರ್ಗೇಷು ಜಾತೇಷು ದೈವಭೂತಾತ್ಮಹೇತುಷು ।**
**ಆಯುಷೇ ವಾಥ ಶಾಂತ್ಯೈವಾ ಶ್ರಿಯೇ ವಾ ಪುಣ್ಯವೃದ್ಧಯೇ ॥**
**ಯೋಗ್ಯತಾಯೈ ಮಂತ್ರಸಿದ್ಧ್ಯೈ ವಿಷ್ಣೋಃ ಪ್ರೀತ್ಯರ್ಥಮೇವ ವಾ ।**
**ಜುಹುಯಾತ್ ಸಹಸ್ರಮಯುತಂ ಲಕ್ಷಂ ಕೋಟಿಮಥಾಪಿ ವಾ ॥**

**(ಅಧ್ಯಾಯ 2. ತಂತ್ರಸಾರ ಸಂಗ್ರಹ)**

ಈ ಮಹಾಯಾಗದ ಐಹಿಕ ಫಲಗಳು ಇವು –

1. ದುಃಸ್ವಪ್ನ ದರ್ಶನಾದಿಗಳಿಂದ ಸೂಚಿತ ಅನಿಷ್ಟದ ನಿವೃತ್ತಿ.
2. ಆಯುರ್ವೃದ್ಧಿ.
3. ಗ್ರಹಚಾರಸೂಚಿತ ದೋಷಗಳ ಶಾಂತಿಯೊಂದಿಗೆ ಜೀವನದಲ್ಲಿ ನೆಮ್ಮದಿ.
4. ಸಂಪತ್ತು – ಕಾಂತಿಗಳ ವೃದ್ಧಿ.
5. ಪುಣ್ಯವೃದ್ಧಿ.
6. ಕರ್ತವ್ಯಾಕರಣ–ಅಕರ್ತವ್ಯಕರಣದಿಂದುಂಟಾದ ಪಾಪಕ್ಷಯವಾಗಿ ಶ್ರೌತಾದಿಕರ್ಮಗಳಲ್ಲಿ ಯೋಗ್ಯತಾಪ್ರಾಪ್ತಿ.
7. ಅಭಿಲಷಿತ ಮಂತ್ರದ ಸಿದ್ಧಿ ಹಾಗೂ ಮುಖ್ಯವಾಗಿ ವಿಷ್ಣುಪ್ರೀತಿ.

ಸಹಸ್ರಕ್ಕಿಂತಲೂ ಅಧಿಕ ಸಂಖ್ಯೆಯ ಆಹುತಿಯುಳ್ಳ ಯಾಗಗಳು ಮಹಾಯಾಗಗಳೆನಿಸುತ್ತವೆ. ಆದ್ದರಿಂದಲೇ ಇದು ಮಹಾವಿಷ್ಣುಯಾಗ ಅಥವಾ ವಿಷ್ಣುಮಹಾಯಾಗ.

ಇಲ್ಲಿ ಸಹಸ್ರ ಆಹುತಿಯನ್ನು ನೀಡಬಹುದು. ಹತ್ತು ಸಾವಿರ –ವಾದರೂ ಸರಿ. ಲಕ್ಷ–ಕೋಟಿಯಾದರೂ ಆಗಬಹುದು. **"ಜುಹುಯಾತ್ ಸಹಸ್ರಮಯುತಂ ಲಕ್ಷಂ ಕೋಟಿಮಥಾಪಿ ವಾ"**

ಯಜಮಾನನ ಶಕ್ತಿ–ಭಕ್ತಿಗಳಿಗೆ ಅನುಸಾರವಾಗಿ ದೇಶ–ಕಾಲಗಳನ್ನು ಲಕ್ಷಿಸಿ ಆಹುತಿ ಸಂಖ್ಯೆಯ ನಿರ್ಧಾರ. ಆಹುತಿಸಂಖ್ಯೆ ಹೆಚ್ಚಿದಂತೆ ಯಾಗವೂ ಹಿಗ್ಗುತ್ತದೆ. ಮಹಾಯಾಗವು ಎಷ್ಟು ಮಹತ್ತನ್ನೂ ಪಡೆಯಬಹುದು.

**ಯಾಗದ್ರವ್ಯ :** ಯಾಗದಲ್ಲಿ ಹವ್ಯದ್ರವ್ಯದ ಬಗೆಗೆ ಶ್ರೀಮದಾಚಾರ್ಯರೇ **"ಆಜ್ಯೇನ ವಾ ಪಾಯಸೇನ"** ಎಂದಾರಂಭಿಸಿ ವಿಸ್ತರಿಸಿ ನುಡಿದಿದ್ದಾರೆ. ಪ್ರಧಾನವಾಗಿ ಇಲ್ಲಿ ಆಜ್ಯ, ಪಾಯಸ, ಅಶ್ವತ್ಥಸಮಿಧೆ, ತಿಲ, ತ್ರಿಮಧುರ ಹಾಗೂ ಅಮೃತಬಳ್ಳಿಯಲ್ಲಿ ಆಹುತಿಯಿದೆ.

ದಧಿ–ಮಧು–ಆಜ್ಯಗಳ ಮಿಶ್ರಣವೇ ತ್ರಿಮಧುರ.

ಹನ್ನೆರಡು ಸೇರು ಅಕ್ಕಿಯಿಂದ ಪರಮಾನ್ನ ನಿರ್ಮಿತವಾಗುತ್ತದೆ. ಅದರಲ್ಲಿ ಹಾಲು, ಕಾಯಿ, ಬೆಲ್ಲ, ತುಪ್ಪ, ಪರಿಮಳ ದ್ರವ್ಯಗಳು ಸೇರಿರುತ್ತವೆ.

ವಿಷ್ಣುಯಾಗದಲ್ಲಿ ಆಹುತಿ ನೀಡಲು ವಿಹಿತವಾದ ಮಂತ್ರಗಳು ಹಲವು. ವಿಷ್ಣುಗಾಯತ್ರೀ ಹಾಗೂ ಸಹಸ್ರನಾಮಗಳಿಂದ ಪ್ರಧಾನಾಹುತಿಯಿದೆ. ಅಷ್ಟಮಹಾಮಂತ್ರಗಳು, ಅದರಲ್ಲೂ ವಿಶೇಷವಾಗಿ ಪುರುಷಸೂಕ್ತ ಶ್ರೀಸೂಕ್ತಗಳಿಂದ ಹೋಮವಿದೆ.

ವಿಷ್ಣುಸೂಕ್ತ ಪ್ರಾಣಾಗ್ನಿ ಸೂಕ್ತ, ನವಗ್ರಹ ಸೂಕ್ತಗಳಿಂದಲೂ ಪರಿವಾರ ದೇವತೋದ್ದೇಶ್ಯಕ ಆಹುತಿ ಪ್ರದಾನವಿದೆ. ಹಾಗಾಗಿ ನವಗ್ರಹಹೋಮ,

ಪುರುಷಸೂಕ್ತ–ಶ್ರೀಸೂಕ್ತಹೋಮ, ವಿಷ್ಣುಗಾಯತ್ರೀ ಹೋಮ, ಅಷ್ಟಾಕ್ಷರ ಹೋಮ, ದ್ವಾದಶಾಕ್ಷರ ಹೋಮ, ವಿಷ್ಣುಸಹಸ್ರನಾಮ ಹೋಮಗಳೆಲ್ಲಾ ಒಂದೆಡೆ ಸೇರಿ ಮಹಾವಿಷ್ಣುಯಾಗವೆನಿಸಿದೆ.

ಇಷ್ಟು ವಿಸ್ತೃತವಾದ ಆಹುತಿದಾನಕ್ಕೆ ಹೆಚ್ಚು ಸಮಯ ತಗಲುವುದ–ರಿಂದಲೇ ವಿಷ್ಣುಯಾಗವು ಸೂರ್ಯೋದಯಕ್ಕೆ ಮೊದಲೇ ಆರಂಭವಾಗ ತಕ್ಕದ್ದು ಎಂಬುದು ಸಾಂಪ್ರದಾಯಿಕ ಕಟ್ಟುಪಾಡಾಗಿದೆ.

**ಪೂಜೆ**–ಯಜ್ಞಾಗ್ನಿಯ ದಕ್ಷಿಣದಲ್ಲಿ ತಂತ್ರಸಾರೋಕ್ತ ಚಕ್ರಾಬ್ಜ ಮಂಡಲವನ್ನು ಬರೆದು ಅದರ ಮಧ್ಯದಲ್ಲಿ ಶಾಲಗ್ರಾಮಾದಿಗಳನ್ನಿಟ್ಟು ತುಲಸೀಪುಷ್ಪಾದಿಗಳಿಂದ ಆಹುತಿಗೊಂದರಂತೆ ಅರ್ಚನೆಯೂ ನಡೆಯ–ಬೇಕು. ಇಲ್ಲಿ ಪಂಚಾಮೃತಾಭಿಷೇಕವೇ ಮೊದಲಾದ ಉಪಚಾರಗಳೂ ನಡೆಯುತ್ತವೆ. ಇದು “ಪೂಜೆ” ಎನಿಸುತ್ತದೆ.

**ಕಲಶ**–ಯಜ್ಞಾಗ್ನಿಯ ಈಶಾನ್ಯದಲ್ಲಿ ಸರ್ವತೋಭದ್ರಾದಿ ಮಂಡಲದಲ್ಲಿ ಕಲಶಪ್ರತಿಷ್ಠೆ. ಸಾಮಾನ್ಯವಾಗಿ ಐದುಕಲಶಗಳನ್ನಿಟ್ಟು ವಿಷ್ಣುಯಾಗ ನಡೆಯುತ್ತದೆ. ಹನ್ನೆರಡು ಹಾಗೂ ಇಪ್ಪತ್ತನಾಲ್ಕು ಕಲಶವಿಧಿಯೂ ಇದೆ. ಪಂಚಕಲಶಗಳಲ್ಲಿ ಪಂಚಪ್ರಾಣಾಂತಸ್ಥಿತನಾದ ವಾಸುದೇವಾದಿ ಪಂಚರೂಪಗಳನ್ನು ಆವಾಹಿಸಿ ಆರಾಧಿಸಲಾಗುತ್ತದೆ. ಮಹಾನಾರಾಯಣೋಪನಿಷತ್ತು, ವೈಷ್ಣವ ಸೂಕ್ತ, ಮಹೈತರೇಯೋಪ –ನಿಷತ್ತು, ಮೂಲಮಂತ್ರ ಹಾಗೂ ಸ್ತೋತ್ರಗಳಿಂದ ಅಭಿಮಂತ್ರಿಸಲ್ಪಟ್ಟ ಕಲಶಗಳಿಂದ ಯಜ್ಞಾಂತದಲ್ಲಿ ಯಜಮಾನ ಕುಟುಂಬವನ್ನು ಅಭಿಷೇಚಿಸುವ ಪ್ರಕ್ರಿಯೆಯಿದೆ.

ಯಜ್ಞಾಗ್ನಿಯ ವಾಯವ್ಯ ಉತ್ತರಗಳ ಮಧ್ಯದಿಕ್ಕಿನಲ್ಲಿ ಪ್ರಧಾನ ಹೋಮದ ಮಂತ್ರಗಳಿಂದ ತರ್ಪಣವನ್ನೂ ನೀಡಲಾಗುವುದು. ತರ್ಪಣಕ್ಕಾಗಿ ಕೇಲೋದಕ(ಎಳನೀರು), ಕ್ಷೀರ ಅಥವಾ ಗಂಧೋದಕ ಗಳನ್ನು ವಿನಿಯೋಗಿಸಲಾಗುವುದು.

ಹೀಗೆ ಪೂಜೆ, ಅಧ್ವರ(ಹೋಮ), ಜಪ(ಅಭಿಮಂತ್ರಣೆ), ಸ್ತೋತ್ರ ಹಾಗೂ ತರ್ಪಣವೆಂಬ ಪಂಚಮುಖದ ಆರಾಧನೆಯಿಂದ ಆರಾಧಿಸಲ್ಪಟ್ಟ ಭಗವಂತ ಅನುಗ್ರಹೋನ್ಮುಖನಾಗುತ್ತಾನೆ. ಸರ್ವಾಭೀಷ್ಟಗಳನ್ನು ಕರುಣಿಸಿ ಕಣ್ಣಿಗೆ ರೆಪ್ಪೆಯಂದದಿ ಕಾಯುತ್ತಾನೆ.

* * *

# ವಾಸ್ತು ಹೋಮ

ಭೂಮಿಯನ್ನೇ ಮುಳುಗಿಸಹೊರಟಿದ್ದವ ದುಷ್ಟ ಹಿರಣ್ಯಾಕ್ಷ. ಕರುಣಾಳು ದೇವ ವರಾಹನಾಗಿ ಬಂದು ಧರೆಯನ್ನುದ್ಧರಿಸಿದ. ಭೂಮಿಯನ್ನು ಮತ್ತೆ ಕಕ್ಷೆಯಲ್ಲಿಟ್ಟ. ಆಗ ವರಾಹದೇವ ಬೆವರ ಹನಿಗಳನ್ನು ಭೂಮಿಗೆ ಸಿಡಿಸಿದ. ಮೂರು ಸ್ವೇದ ಬಿಂದುವಿನಿಂದ ಮೂವರು ಆವಿರ್ಭವಿಸಿದರು. ಒಬ್ಬ ಪೀತವರ್ಣದ ನರಕಾಸುರ. ಇನ್ನೋರ್ವ ಕೆಂಪುಬಣ್ಣದ ಮಂಗಳ, ಕುಜ. ಮತ್ತೊಬ್ಬ ಕಪ್ಪುಬಣ್ಣದ ವಾಸ್ತುಪುರುಷ. ಈ ಮೂವರೂ ಭೂಮಾತೆಯ ತನುಜರು. ಭೂವರಾಹನ ಮಕ್ಕಳು. ಆಚಾರ್ಯರು ತಮ್ಮ ತಂತ್ರಸಾರ ಸಂಗ್ರಹದಲ್ಲಿ ಹೇಳಿದರು. **'ವಾಸ್ತುರ್ವ -ರಾಹಸ್ಯ ಹರೇಃ ಸುತಃ'** ವಾಸ್ತುಪುರುಷನು ವರಾಹರೂಪೀ ಶ್ರೀಹರಿಯ ಮಗ ಎಂದು.

'ಅಂಧಕಾಸುರ ಸಂಗ್ರಾಮದಲ್ಲಿ ಶಿವನಿಂದಾಗಿ ಆವಿರ್ಭವಿಸಿದ ವಾಸ್ತುಪುರುಷನೋರ್ವನಿದ್ದಾನೆ. ಕಶ್ಯಪಗೃಹಿಣಿಯಾದ ಸಿಂಹಿಕೆಯಲ್ಲಿ ಹುಟ್ಟಿದ ವಾಸ್ತು ಮತ್ತೊಬ್ಬನಿದ್ದಾನೆ. ಪುರಾಣಗಳಲ್ಲಿ ಈ ಬಗ್ಗೆ ಮಾಹಿತಿಯಿದೆ. ವರಾಹಸುತನಾದ ಪ್ರಧಾನ ವಾಸ್ತುವಿನ ಸಹಚರರಿವರು. ಪ್ರಾಸಾದದ ಹಾಗೂ ಸ್ವಗೃಹದ ಸುತ್ತಮುತ್ತಲಿನ ಪ್ರಾಕಾರ ಮೊದಲಾದ ಉಪವಿಭಾಗಗಳಿಗೆ ಸಂಬಂಧಿಸಿದವರು.

ವಾಸ್ತು ಪುರುಷನು ಭೂಮಿಯ ಮಗನಾಗಿ ಸಚ್ಚೇತನನಾಗಿದ್ದರೂ ನರಕಾಸುರನಂತೆ ಅಸುರಾವೇಶಕ್ಕೆ ಒಳಗಾಗಿ ಬಿಟ್ಟ. ಜಗತ್ಪೀಡಕನಾಗಿ ದೇವಲೋಕಕ್ಕೂ ಲಗ್ಗೆಯಿಟ್ಟ. ದೇವೇಂದ್ರನು ವಜ್ರಾಯುಧದಿಂದ ಬಡಿದು

ಭೂಮಿಯಲ್ಲಿ ಬೀಳಿಸಿಬಿಟ್ಟ. ಭೂಮಿಯಲ್ಲಿ ಬೋರಲಾಗಿ ಬಿದ್ದ ವಾಸ್ತು. ಈಶಾನ್ಯಕ್ಕೆ ತಲೆ, ನೈರ್ಋತ್ಯಕ್ಕೆ ಕಾಲು, ಕೆದರಿದ ಕೂದಲು, ಕರ್ರಗಿನ ದೊರಗು ಮೈ, ಕೆಂಗಡರಿದ ಕಣ್ಣು, ಜೋಡಿಸಿದ ಎರಡು ಕೈ, ಬೋರಲು ಬಿದ್ದೂ ಕೈ ಮುಗಿದ ವಾಸ್ತುವಿನ ಮೇಲೆ ಬ್ರಹ್ಮಾದಿದೇವತೆಗಳು ಬಂದು ಕುಳಿತರು. ವಾಸ್ತುವಿನ ಅದೃಷ್ಟ ದೊಡ್ಡದು. ಇವರ ಸ್ಪರ್ಶಮಾತ್ರದಿಂದ ವಾಸ್ತುವಿನಲ್ಲಿದ್ದ ಅಸುರ ಬೇಸ್ತುಬಿದ್ದ. ವಾಸ್ತು ಶುದ್ಧನಾದ. ಅಸುರಾವೇಶ ತೊಲಗಿತು.

ಕೈಮುಗಿದು ದೇವತೆಗಳಲ್ಲಿ ವಿನಂತಿಸಿದ. 'ನನ್ನನ್ನು ಉದ್ಧರಿಸಿರಿ. ನನಗೊಂದು ಕರ್ತವ್ಯಕರ್ಮ ಆದೇಶಿಸಿರಿ'. ದೇವತೆಗಳೆಂದರು "ಹೊಟ್ಟೆ ಹೊರೆಯುವುದಕ್ಕಾಗಿ ದೇವತೆಗಳೆಡೆ ದಂಡೆತ್ತಿ ಬರಬೇಡ. ನೀನು ನೆಲದ ಮಗ. ಈ ಭೂತಲದಲ್ಲಿಯೇ ಸ್ಥಿರನಾಗಿ ನೆಲಸು. ಭೂಮಿಯನ್ನು ಅಗೆಯುವ ಮಂದಿ ನಿನ್ನನ್ನು ಆರಾಧಿಸುತ್ತಾರೆ. ನಿನ್ನ ಮೇಲೆ ಸನ್ನಿಹಿತರಾದ ನಮ್ಮನ್ನು ಆಹುತಿಯನ್ನಿತ್ತು ಪೂಜಿಸುತ್ತಾರೆ. ಅವರು ಮಾಡುವ ಈ ಪೂಜೆ, ಹೋಮ, ಬಲಿಪ್ರದಾನಗಳಿಂದ ನಿನ್ನ ಜೀವನ. ಇದಕ್ಕೆ ಪ್ರತಿಯಾಗಿ ನೀನು ಅವರ ನೆಲದಲ್ಲಿ ಸ್ಥಿರನಾಗು, ಶಿವನಾಗು, ಶುಭನಾಗು. ಅವರ ಗೃಹವು ಶಾಂತಿ–ನೆಮ್ಮದಿಗಳಿಗೆ ತವರಾಗುವಂತೆ ನೋಡಿಕೋ. ರೋಗ ರುಜಿನಗಳಿಗೆ ಆಸ್ಪದವಾಗದಂತೆ ರಕ್ಷೆಯಾಗು. ನೂತನಗೃಹಾದಿಗಳನ್ನು ನಿರ್ಮಿಸಿ ಈ ಬಗೆಯ ಪೂಜೆ ನಡೆಸದೆ ಒಂದೊಮ್ಮೆ ಅಲ್ಲಿ ವಾಸಿಸ ತೊಡಗಿದರೆ ಆ ಗೃಹವೇ ನಿನಗೆ ಆಹಾರ"

ಗೃಹಪ್ರವೇಶಾದಿ ಸಂದರ್ಭಗಳಲ್ಲಿ ವಾಸ್ತುಪೂಜೆಯನ್ನು ಖಡ್ಡಾಯವಾಗಿ ನಡೆಸತಕ್ಕದ್ದು ಎಂಬುದನ್ನು ಪುರಾಣಗಳು ಹೇಳುವ ಪರಿಯಿದು.

## ವಾಸ್ತುಶಾಂತಿ

ಸ್ವಗೃಹದ ನಿರ್ಮಾಣವೆಂಬುದು ಜನ್ಮಾಂತರದ ಪುಣ್ಯದ ಫಲವೇನೋ ಹೌದು. ಆದರೆ ಇದೊಂದು ಪ್ರಕೃತಿಯ ಮೇಲೆ ಮಾಡುವ ಅತಿಕ್ರಮಣ. ಮನೆಗಾಗಿ ಆತ ಭೂಮಿ ಅಗೆದ. ಕಲ್ಲು ಒಡೆಸಿದ. ಮರಗಳನ್ನು ಕಡಿದ.

"ಮನೆಯನ್ನು ಕಟ್ಟು" ಎಂದಿತು ಶಾಸ್ತ್ರ. ಪರರ ಮನೆಯಲ್ಲಿದ್ದು ಮಾಡುವ ಧರ್ಮಾನುಷ್ಠಾನಗಳ ಒಂದಿಷ್ಟು ಪುಣ್ಯಾಂಶ ಮನೆಯಲ್ಲಿ ವಾಸಿಸಲು ಅವಕಾಶವಿತ್ತ ಮನೆಯೊಡೆಯನಿಗೆ ಸೇರುತ್ತದೆ. **'ಗೃಹಸ್ವಾಮೀ ತದರ್ಹತಿ'** ಪೂರ್ಣಫಲವನ್ನು ತಾನೇ ಪಡೆಯಬೇಕಾದರೆ ಸ್ವಂತದ ನೆಲೆ ಬೇಕು. ಅದಕ್ಕಾಗಿ ಮನೆ ಕಟ್ಟಬೇಕು. ಆದರೆ ಮನೆ ನಿರ್ಮಾಣವು ಅನೇಕ ದೋಷಗಳ ಆಗರ. ಭೂಮಿ ಅಗೆಯುವುದು. ಬಂಡೆ ಒಡೆಯುವುದು. ಸಸ್ಯಗಳನ್ನು ಬೀಳಿಸುವುದು. ಮರ ಕೊಯ್ಯುವುದು, ಕೆಲವೊಮ್ಮೆ ಹುತ್ತ, ಬಿಲಗಳನ್ನು ನೆಲಸಮಗೊಳಿಸುವುದು. ಹೀಗೆ ಹತ್ತು ಹಲವು ಅತಿಕ್ರಮಣಗಳು ಇಲ್ಲಿ ಅನಿವಾರ್ಯ. ಅವೆಷ್ಟೋ ಶಕ್ತಿಗಳು, ಪ್ರಾಣಿಗಳು, ಹಕ್ಕಿಗಳು, ಹುಳು-ಹುಪ್ಪಟೆಗಳು ಈ ಹಿಂದೆ ಆ ನಿವೇಶನದಲ್ಲಿ ವಾಸವಾಗಿದ್ದವು. ಈಗ ಬೇರೆಡೆ ಸಾಗಬೇಕಾಗುತ್ತದೆ ಇಲ್ಲವೇ ಸಾಯಬೇಕಾಗುತ್ತದೆ. ತನ್ನ ಮನೆಗಾಗಿ ಮನುಜ ಅವೆಷ್ಟೋ ಪ್ರಾಣಿಗಳ ಮನೆಯನ್ನು ಧ್ವಂಸಗೈದ. ಈ ಎಲ್ಲಾ ದೋಷಗಳ ಉಪಶಮನಕ್ಕಾಗಿ ಒಂದು ಶಾಂತಿಕರ್ಮವನ್ನು ಶಾಸ್ತ್ರ ಆದೇಶಿಸಿತು. ಅದೇ ವಾಸ್ತುಶಾಂತಿ.

**'ವಾಸ್ತುದೋಷಗಳ ಶಮನವೂ ವಾಸ್ತುಶಾಂತಿಯ ಉದ್ದೇಶ'**. ನಿವೇಶನಕ್ಕೊಂದು ವಾಸ್ತು(ನೀತಿ-ನಿಬಂಧನೆ)ವಿದೆ. ಮನೆಗೊಂದು ವಾಸ್ತು ನಿಯಮವಿದೆ. ಮನೆ ಬಾಗಿಲಿಗೆ, ಕಪಾಟುಗಳಿಗೆ ಪ್ರತ್ಯೇಕ ವಾಸ್ತು ನಿಯಮಗಳಿವೆ.

ಮನೆ ಕಟ್ಟಲು ಆರಿಸಿಕೊಂಡ ನಿವೇಶನ(ಜಾಗ) ಜೌಗುಪ್ರದೇಶವಾಗಿರಕೂಡದು. ದಕ್ಷಿಣದಲ್ಲಿ ಎತ್ತರವಿದ್ದು ಈಶಾನ್ಯ ಪೂರ್ವ ಅಥವಾ ಉತ್ತರದೆಡೆ ನೀರು ಹರಿಯುವಂತೆ ತಗ್ಗಾಗಿರಬೇಕು. ಈಶಾನ್ಯ ದಿಕ್ಕಿನಲ್ಲಿ ಭಾವಿ ತೋಡುವ ಸಾಧ್ಯತೆಯಿರಬೇಕು. ಸರ್ಪಗಳ ವಸತಿಯುಳ್ಳ ಅಥವಾ ಇದ್ದ ಹುತ್ತವಿರಕೂಡದು. ಇದಕ್ಕೆ ವ್ಯತಿರಿಕ್ತವಾಗಿ ನೆಲವಿದ್ದರೆ 'ಆ ಸ್ಥಳದಲ್ಲಿ ವಾಸ್ತುದೋಷವಿದೆ' ಎನ್ನಲಾಗುತ್ತದೆ.

ಅಲ್ಲಿ ಕಟ್ಟುವ ಮನೆಯಲ್ಲೂ ವಾಸ್ತು ಸರಿಯಾಗಿರಬೇಕು. ವಾಸ್ತು ಪುರುಷನ ಶಿರವಿರುವ ಈಶಾನ್ಯದಲ್ಲಿ ದೇವಮಂದಿರವಿರತಕ್ಕದ್ದು. ಬೋರಲು ಬಿದ್ದ

ಆತನ ಬಲಗೈಯಿರುವ ಆಗ್ನೇಯದಲ್ಲಿ ಅಗ್ನಿಸಂಬಂಧಿಯಾದ ಅಡುಗೆ ಮನೆಯಿರಬೇಕು. ಈ ಎರಡೂ ಕಡೆಗಳಲ್ಲಿ ಶೌಚಾಲಯ ಮುಂತಾದವು ಬರುವಂತಿಲ್ಲ. ದಕ್ಷಿಣದಲ್ಲಿ ಶಯನಗೃಹವೂ ಪೂರ್ವದಲ್ಲಿ ಭೋಜನಗೃಹ ಸ್ನಾನಗೃಹಾದಿಗಳೂ ನೈರ್ಋತ್ಯದಲ್ಲಿ ಶಸ್ತ್ರಾಗಾರ ಧನಾಗಾರಾದಿಗಳೂ ಇರುವಂತೆ ಆದೇಶವಿದೆ. ಎಲ್ಲಕ್ಕಿಂತ ಮುಖ್ಯವಾಗಿ ಸೂರ್ಯನ ಬೆಳಕು, ಪರಿಶುದ್ಧ ಗಾಳಿಗಳಿಗೆ ಅವಕಾಶವಿರುವಂತೆ ಸೌಲಭ್ಯ ಅನುಕೂಲತೆಗಳನ್ನು ಪರಿಗಣಿಸಿ ಗೃಹವನ್ನು ನಿರ್ಮಿಸಬೇಕು. ಅವಕಾಶವಿದ್ದೂ ಈ ನಿಯಮಗಳನ್ನು ತಪ್ಪಿದಾಗ ಅದು ವಾಸ್ತುದೋಷ ವೆನಿಸುತ್ತದೆ. ಮನೆಯ ಪ್ರಧಾನದ್ವಾರವು ಆಯವಿಲ್ಲದೆ ನಿರ್ಮಿತವಾಗಿದ್ದರೆ ಅಥವಾ ಕಪಾಟುಗಳೂ ಭಾರದ ವಸ್ತುಗಳೂ ಎಲ್ಲೆಂದರಲ್ಲಿ ಪೋಣಿಸಲ್ಪಟ್ಟಿದ್ದರೆ ವಾಸ್ತುದೃಷ್ಟಿಯಿಂದ ಸಾಧುವೆನಿಸುವುದಿಲ್ಲ. ಅವೂ ವಾಸ್ತುದೋಷಗಳೇ.

ಇಂತಹ ವಾಸ್ತುದೋಷಗಳು ಅನಿವಾರ್ಯತೆ ಹಾಗೂ ಅನವಧಾನತೆ ಯಿಂದಾಗಿ ಗೃಹನಿರ್ಮಾಣ ಕಾಲದಲ್ಲಿ ಸಂಭವಿಸಿರುತ್ತವೆ. ಪಟ್ಟಣದಲ್ಲಂತೂ ಇದನ್ನು ಅಲ್ಲಗಳೆಯುವಂತಿಲ್ಲ. ಈ ಎಲ್ಲಾ ವಾಸ್ತುದೋಷಗಳ ಶಮನಕ್ಕಾಗಿ ವಾಸ್ತುಶಾಂತಿಯಿದೆ.

## ವಾಸ್ತುಶಾಂತಿ ಯಾವಾಗ?

ಗೃಹಪ್ರವೇಶಕ್ಕಿಂತ ಮೊದಲೇ ವಾಸ್ತುಶಾಂತಿ ನಡೆಸಬೇಕು. 'ವಾಸ್ತು ಪೂಜಾವಿಧಿಃ ಕಾರ್ಯಃ ಪೂರ್ವಮೇವ ಪ್ರವೇಶತಃ' ಎಂಬ ನಿರ್ಣಯ ಸಿಂಧು ವಚನದಂತೆ ಗೃಹಪ್ರವೇಶಕ್ಕಿಂತ ಮೊದಲೇ ವಾಸ್ತುಶಾಂತಿ ನಡೆಸತಕ್ಕದ್ದು. ಏಕೆಂದರೆ ವಾಸ್ತುಶಾಂತಿಯಲ್ಲಿ ಗೃಹಸಂಬಂಧಿ ಸಂಸ್ಕಾರಗಳು ವಿಪುಲವಾಗಿವೆ. ಸಂಸ್ಕಾರಗೊಂಡು ಸುಸಂಸ್ಕೃತವಾದ ಗೃಹವನ್ನೇ ಪ್ರವೇಶಿಸ ಬೇಕು. ಕೆಲವೆಡೆ ಗೃಹಪ್ರವೇಶವಾದ ಮೇಲೆ ವಾಸ್ತುಶಾಂತಿಯನ್ನು ನಡೆಸುತ್ತಿರುವುದು ಕಂಡುಬರುತ್ತದೆ. ಇದನ್ನು ತಿದ್ದಿಕೊಳ್ಳಬೇಕು.

ಪ್ರಾತಃ ಕಾಲದಲ್ಲಿ(ಹಗಲಿನಲ್ಲಿಯೇ) ವಾಸ್ತುಶಾಂತಿಯನ್ನು ನಡೆಸುವಂತೆ ನಿರ್ಣಯಸಿಂಧು ಆದೇಶಿಸಿದೆ.

'ವಾಸ್ತುಶಾಂತಿರ್ದಿವೈವೋಕ್ತಾ ಪ್ರವೇಶಸ್ತು ನಿಶಿ ಕ್ವಚಿತ್' 'ಹಗಲಿನಲ್ಲೇ ವಾಸ್ತುಶಾಂತಿ. ಪ್ರವೇಶವು ಕೆಲವೊಮ್ಮೆ ರಾತ್ರಿಯಲ್ಲಾದರೂ ಆಗಬಹುದು' ಎಂದು. ಆದರೆ ತಂತ್ರಗ್ರಂಥಗಳಲ್ಲಿ ರಾತ್ರಿಕಾಲದಲ್ಲಿ ವಾಸ್ತುಶಾಂತಿ ವಿಧಿಯನ್ನೂ ಕಾಣುತ್ತೇವೆ. ವಾಸ್ತುಹೋಮದ ಜೊತೆಗೇ ವಾಸ್ತುಬಲಿ, ಕ್ಷೇತ್ರಪಾಲಬಲಿಗಳೂ ಸೇರಿದ್ದು, ಈ ಬಲಿವಿಧಿಗೆ ರಾತ್ರಿಕಾಲವು ಪ್ರಶಸ್ತವಾದು -ದರಿಂದಲೂ ಅನೇಕ ಪ್ರದೇಶಗಳಲ್ಲಿ ವಾಸ್ತುಹೋಮವನ್ನು ರಾತ್ರಿಯಲ್ಲೇ ನಡೆಸುವ ಸಂಪ್ರದಾಯವಿದೆ. ಪ್ರಾತಃಕಾಲದ ಮುಹೂರ್ತಕ್ಕಿಂತ ಮೊದಲೇ ನಾಲ್ಕೈದುಘಂಟೆಗಳ ಕಾಲಾವಧಿಯನ್ನು ಅಪೇಕ್ಷಿಸುವ ವಾಸ್ತುಶಾಂತಿಯ ಪ್ರಕ್ರಿಯೆಗಳು ಮುಗಿಯಬೇಕಾಗಿರುವುದರಿಂದ ಪ್ರವೇಶಕ್ಕೆ ಪೂರ್ವದಿನವೇ ವಾಸ್ತುಶಾಂತಿ ಮಾಡುವುದು ಅನುಕೂಲ. ತಮ್ಮ ತಮ್ಮ ಸಂಪ್ರದಾಯವನ್ನೂ ಅನುಕೂಲತೆಯನ್ನೂ ಅನುಸರಿಸಿ ಹಗಲಾಗಲೀ ರಾತ್ರಿಯಾಗಲೀ ಗೃಹ ಪ್ರವೇಶಕ್ಕೆ ಮುಂಚಿತವಾಗಿಯೇ ವಾಸ್ತುಶಾಂತಿಯನ್ನು ನಡೆಸಬೇಕು. ರಾತ್ರಿಹೊತ್ತು ವಾಸ್ತುಹೋಮ ನಡೆಸುವುದಾದರೆ ಯಜಮಾನ ದಂಪತಿಗಳು ಮಧ್ಯಾಹ್ನ ಊಟ ಮಾಡದಿರುವುದು ಅಪೇಕ್ಷಿತವಾಗುತ್ತದೆ. ಊಟ ಮುಗಿಸಿದ ವ್ಯಕ್ತಿ ಆ ದಿನ ಪೂರ್ಣಾಹುತಿಯನ್ನು ಹಾಕುವ ಅರ್ಹತೆಯನ್ನು ಕಳೆದುಕೊಂಡಿರುತ್ತಾನೆ.

ಗೃಹನಿರ್ಮಾಣದ ಕೆಲಸ ಪೂರ್ತಿಯಾಗದೇ ವಾಸ್ತುಶಾಂತಿಯೊಂದಿಗೆ ಗೃಹಪ್ರವೇಶ ಮಾಡುವುದೂ ಸರಿಯಲ್ಲ. ಕನಿಷ್ಠ ಪಕ್ಷ ಮನೆಗೆ ಕಿಟಕಿ-ಬಾಗಿಲುಗಳು ಸಂಬದ್ಧವಾಗಿರಬೇಕು. ಛಾವಣಿ-ಅಟ್ಟಗಳು ಸರಿಯಾಗಿರಬೇಕು.

**ಅಕವಾಟಮನಾಚ್ಛನ್ನಮದತ್ತಬಲಿಭೋಜನಮ್ ।**
**ಗೃಹಂ ನ ಪ್ರವಿಶೇತ್ ಧೀಮಾನ್ ಆಪದಾಮಾಕರೋ ಹಿ ತತ್ ॥**

ಬಾಗಿಲು ಕಿಟಕಿಗಳ ಆಚ್ಛಾದನೆಯಿಲ್ಲದ, ಛಾವಣಿಗೆ ಮುಚ್ಚಿಗೆಯಿಲ್ಲದ ಮನೆಯನ್ನು ಪ್ರವೇಶಿಸಕೂಡದು. ವಾಸ್ತುಶಾಂತಿ-ಬಲಿ-ವಿಪ್ರಭೋಜನಾದಿಗಳನ್ನು ನಡೆಸದೇ ಗೃಹಪ್ರವೇಶ ಮಾಡಿದರೆ ಅದು ಆಪತ್ತಿನ ಆಗರವಾಗಲಿದೆ.

## ಭಾವಿ-ನೀರಿನ ತೊಟ್ಟಿಗಳಿಗೆ ದಿಕ್ಕು-ಫಲ

ಭಾವಿ ಪೂರ್ವದಲ್ಲಾದರೆ ಐಶ್ವರ್ಯ. ಆಗ್ನೇಯದಲ್ಲಿ ಪುತ್ರಹಾನಿ. ದಕ್ಷಿಣದಲ್ಲಿ ಸ್ತ್ರೀನಾಶ. ನೈಋತ್ಯದಲ್ಲಿ ನಿಧನ. ಪಶ್ಚಿಮದಲ್ಲಿ ಸಂಪತ್. ವಾಯವ್ಯದಲ್ಲಿ ಶತ್ರುಭಯ. ಉತ್ತರದಲ್ಲಿ ಸೌಖ್ಯ. ಈಶಾನ್ಯದಲ್ಲಿ ಪುಷ್ಟಿ. ಮಧ್ಯದಲ್ಲಾದರೆ ಧನಹಾನಿ. ಹಾಗಾಗಿ ಈಶಾನ್ಯ, ಉತ್ತರ, ಪೂರ್ವ, ಪಶ್ಚಿಮಗಳು ಭಾವಿ ನೀರಿನತೊಟ್ಟಿಗಳಿಗೆ ಪ್ರಶಸ್ತ. ಇದು ನೆಲದಲ್ಲಿ ತೋಡುವ ತೊಟ್ಟಿಗಳ ಬಗೆಗೆ. ಭವನದ ಊರ್ಧ್ವಭಾಗದಲ್ಲಿಡುವ ನೀರಿನ ಸಂಗ್ರಹಪಾತ್ರೆ ನೈಋತ್ಯ ದಿಕ್ಕಿನಲ್ಲಿರುವುದು ಶ್ರೇಷ್ಠ. ಏಕೆಂದರೆ ಭಾರದ ವಸ್ತು ಈಶಾನ್ಯಾದಿಗಳಲ್ಲಿರಕೂಡದು.

ದಕ್ಷಿಣಾಯನದಲ್ಲಿ ವಾಸ್ತುಶಾಂತಿ ಗೃಹಪ್ರವೇಶಗಳು ಪ್ರಶಸ್ತವಲ್ಲ. ಅದರಲ್ಲೂ ಕರ್ಕಾಟಕದಲ್ಲಿ ರವಿಯಿರುವ ಆಷಾಢಕಾಲದಲ್ಲಿ, ಧನುರ್ಮಾಸದಲ್ಲಿ, ಅಧಿಕಮಾಸ ಹಾಗೂ ಗುರುಶುಕ್ರರು ಅಸ್ತಂಗತರಾಗಿರುವ ಮೌಢ್ಯಕಾಲದಲ್ಲಿ ಸುತರಾಂ ಕೂಡದು.

## ವಾಸ್ತುಹೋಮ ವಿಧಿವಿಧಾನಗಳು

**ವಾಸ್ತುಶಾಂತಿಗೆ ಪೂರ್ವಸಿದ್ಧತೆ :**

ಗೃಹಪ್ರವೇಶಕ್ಕೆ ಶುಭಮುಹೂರ್ತವನ್ನು ಸ್ಥಿರಲಗ್ನವನ್ನು ಜ್ಯೋತಿಷಿಕರಿಂದ ತಿಳಿದು ನಿಶ್ಚಯಿಸಬೇಕು. ಆ ಕಾಲಕ್ಕೆ ಗೃಹನಿರ್ಮಾಣದ ಕೆಲಸ ಮುಗಿದು ಸುಣ್ಣ-ಬಣ್ಣಗಳಿಂದ ಮನೆಯು ಅಲಂಕೃತವಾಗಬೇಕು. ಮನೆಯ ಮುಂಭಾಗದಲ್ಲಿ ತುಳಸಿಯ ವೃಂದಾವನವೊಂದು ರಂಗವಲ್ಲಿಯಿಂದ

ಅಲಂಕೃತಗೊಳ್ಳಬೇಕು. ಚಪ್ಪರ-ತಳಿರು-ತೋರಣಗಳಿಂದ ಮನೆಯನ್ನು ಅಲಂಕರಿಸಿ ಗೋಮಯದಿಂದ ಶುದ್ಧೀಕರಿಸಬೇಕು.

ಶುಭದಿನದಂದು ಪ್ರಾತಃಕಾಲದಲ್ಲಿ ಗೋಮಯ, ಗೋಮೂತ್ರ, ಹಾಲು, ಮೊಸರು, ತುಪ್ಪಗಳನ್ನು ವಿಧಿಬದ್ಧವಾಗಿ ಮೇಲನೆ ಮಾಡಿ ಪಂಚಗವ್ಯದಿಂದ ಗೃಹವನ್ನು ಪ್ರೋಕ್ಷಿಸಬೇಕು. ಗೃಹನಿರ್ಮಾಣದ ಜವಾಬ್ದಾರಿಯನ್ನು ಹೊತ್ತ ಶಿಲ್ಪಿಯನ್ನು ವಸ್ತ್ರಹಿರಣ್ಯಾದಿಗಳಿಂದ ಸತ್ಕರಿಸಿ ಸಂತೋಷಗೊಳಿಸಿ ಆತನಿಂದ ಗೃಹವನ್ನು ಸ್ವಂತಕ್ಕೆ ಸ್ವೀಕರಿಸಬೇಕು. ಇದನ್ನು 'ಗೇಹಪರಿಗ್ರಹ'ವೆನ್ನುವರು. ಇಲ್ಲಿ ಶಿಲ್ಪಿ ಹಾಗು ಯಜಮಾನನಿಗೆ ಸುರಸವಾದ ಸಂಭಾಷಣೆಯಿದೆ. ಈ ವಚನ-ಪ್ರತಿವಚನಗಳು ವಾಸ್ತುವಿಧಿಯ ಪ್ರಯೋಗಗಳಲ್ಲಿ ಲಭ್ಯವಿವೆ.

**ಸಪ್ತಶುದ್ಧಿ :** ಖನನ, ಹರಣ, ದಾಹ, ಪೂರಣ ಎಂಬ ನಾಲ್ಕರ ಜೊತೆಗೆ ಗೋನಿವಾಸನ, ವಿಪ್ರೋಚ್ಛಿಷ್ಟ ಹಾಗೂ ಪಂಚಗವ್ಯಗಳೆಂಬ ಮೂರು ವಿಧಿ ಸೇರಿ ಸಪ್ತಶುದ್ಧಿಯೆನಿಸಿದೆ. ಗೃಹದ ಈಶಾನ್ಯ ಭಾಗದಲ್ಲಿ ಮಣ್ಣನ್ನು ಅಗೆಯುವುದು, ಮಣ್ಣು ತೆಗೆಯುವುದು. ಆ ಗರ್ತದಲ್ಲಿ ಅಗ್ನಿಯನ್ನಿಟ್ಟು ಬಿಸಿಗೊಳಿಸುವುದು ಮತ್ತೆ ಮಣ್ಣಿನಿಂದ ತುಂಬುವುದು ಎಂಬ ನಾಲ್ಕು ವಿಧಿಯನ್ನು ಮಂತ್ರಪೂರ್ವಕ ನಡೆಸುವುದು ಮತ್ತು ಪಂಚಗವ್ಯದಿಂದ ಪ್ರೋಕ್ಷಿಸುವುದು. ಮುಂದಿನ ಗೋನಿವಾಸನ ಹಾಗೂ ವಿಪ್ರೋಚ್ಛಿಷ್ಟಗಳಿಗೆ ಬಹಳ ಮಹತ್ವವಿದೆ.

ಗೋನಿವಾಸನವೆಂದರೆ ಗೋಪ್ರವೇಶವಲ್ಲ. ಮನೆಯಲ್ಲಿ ಗೋವನ್ನೂ ಅದರ ಕರುವನ್ನೂ ಒಂದೆರಡು ದಿನಗಳ ತನಕ ವಾಸ ಮಾಡಿಸುವುದು. ಗೋಮಾತೆಯ ಮೈವಾಸನೆಯಿಂದ ಗೃಹಶುದ್ಧಿಯಾಗುತ್ತದೆ. ಗೋವಿಗೆ ಹಸಿ ಹುಲ್ಲುಹಾಕಿ ಮನೆಯಲ್ಲಿ ಇರಗೊಳಿಸಿದಾಗ ಆ ನಾಟಿಗೋವು ಗೃಹದಲ್ಲಿ ಶಾಂತವಾಗಿ ವಾಸಿಸಿದರೆ ಮಾತ್ರ ಮನೆಯು ವಾಸಯೋಗ್ಯ ವೆಂದು ತೀರ್ಮಾನಿಸಬೇಕು. ಗೋವು ಗೃಹವನ್ನು ಪ್ರವೇಶಿಸಿದೊಡನೆಯೇ ತುಂಬಾ ಅಶಾಂತಿಯಿಂದ ವರ್ತಿಸಿದರೆ ರಕ್ಷೋಘ್ನಹೋಮದ ಮೂಲಕ ಶಾಂತಿಯನ್ನು ಮಾಡಿಸಿಕೊಳ್ಳಬೇಕು.

ಗೋನಿವಾಸದೊಂದಿಗೇ ಆ ಗೃಹದಲ್ಲಿ ವಿಪ್ರರನ್ನು ಸತ್ಕರಿಸಿ ಭೋಜನ ನೀಡಬೇಕು. ವಿಪ್ರನ 72,000 ನಾಡಿಗಳಲ್ಲಿರುವ ಭಗವಂತನ 36,000 ಜೋಡಿರೂಪಗಳನ್ನು ಅನುಸಂಧಾನ ಮಾಡುತ್ತಾ ಊಟಹಾಕಿ ವಿಪ್ರನ ಉಚ್ಛಿಷ್ಟ ಆ ಮನೆಯಲ್ಲಿ ಬೀಳಬೇಕು. ವಾಸ್ತುಹೋಮಕ್ಕಿರುವಷ್ಟೇ ಮಹತ್ವ ಈ ವಿಪ್ರೋಚ್ಛಿಷ್ಟ ಪ್ರಕ್ರಿಯೆಗೂ ಇದೆ. ದೇವಸ್ಥಾನದ ಗರ್ಭಗುಡಿಯಲ್ಲಿ ದೇವನನ್ನು ಪ್ರತಿಷ್ಠೆ ಮಾಡುವುದಕ್ಕೆ ಮುಂಚೆಯೂ ಆ ಗುಡಿಯಲ್ಲಿ ವಿಪ್ರೋಚ್ಛಿಷ್ಟ ಎಂಬ ಪ್ರಕ್ರಿಯೆ ನಡೆಯುತ್ತದೆ.

**ಸುಧಾಕಲಶ :** 'ಸೂತ್ರವೇಷ್ಟಿತ ಕಲಶ'ವೊಂದನ್ನು ಅಷ್ಟದಲಪದ್ಮಮಂಡಲ ದಲ್ಲಿ ಸ್ಥಾಪಿಸಿ ಕಲಶದಲ್ಲಿ ಶುದ್ಧೋದಕದೊಡನೆ ಗರಿಕೆ, ಪಂಚರತ್ನ, ಪಂಚಪಲ್ಲವಾದಿಗಳನ್ನು ಹಾಕಿ ವಾಸ್ತು-ರಕ್ಷೋಘ್ನ ದೇವತೆಗಳನ್ನು ಆವಾಹಿಸಿ ಪೂಜಿಸಬೇಕು. ಆ ಕಲಶವನ್ನು ಸ್ಪರ್ಶಿಸಿಕೊಂಡು ನಾಲ್ವರು ವಿಪ್ರರು ರಕ್ಷೋಘ್ನ ಸೂಕ್ತ, ಶಂನ ಸೂಕ್ತ, ಶ್ರೀಸೂಕ್ತ, ಪುರುಷಸೂಕ್ತ, ವೇದಚತುಷ್ಟಯ ಶಾಂತಿಮಂತ್ರ, ರಕ್ಷೋಘ್ನಮಂತ್ರಾದಿಗಳಿಂದ ಅಭಿಮಂತ್ರಿಸಬೇಕು. ಕಲಶದೊಂದಿಗೆ ಗೃಹರಕ್ಷೆಗಾಗಿ ಕಟ್ಟಬೇಕಾಗುವ ದರ್ಭೆ ಹಗ್ಗ ಹಾಗೂ ತ್ರಿವೃತ ಸೂತ್ರವನ್ನೂ ಅಭಿಮಂತ್ರಿಸಬೇಕು.

ಕಲಶದಲ್ಲಿ ಆವಾಹಿತರಾದ ವಾಸ್ತು ಮೊದಲಾದ ದೇವತೆಗಳಿಗೆ ಪೂಜೆಯನ್ನು ಮುಗಿಸಿ ಆ ಕಲಶದ ನೀರನ್ನು ರಕ್ಷೋಘ್ನ ಸೂಕ್ತವನ್ನು ಪಠಿಸುತ್ತಾ ಗೃಹದ ಹೊರಗೆ ಸುತ್ತಲೂ ಪ್ರೋಕ್ಷಿಸಬೇಕು. ಹಾಗೆಯೇ

**ವಿಧಾಯ ವಾಸ್ತುಪೂಜಾಂ ಚ ಗೃಹಂ ಸೂತ್ರೇಣ ಸರ್ವಶಃ ।**
**ಪಾವಮಾನೇನ ಸೂಕ್ತೇನ ರಕ್ಷೋಘ್ನೇನ ಚ ವೇಷ್ಟಯೇತ್ ॥**

**(ಪ್ರಯೋಗ ಪಾರಿಜಾತ)**

ಎಂಬ ಮಾತಿನಂತೆ ಅಭಿಮಂತ್ರಿತವಾದ ನೂಲನ್ನು ಈಶಾನ್ಯ ದಿಕ್ಕಿನಿಂದಾರಂಭಿಸಿ ಪ್ರದಕ್ಷಿಣಾಕಾರವಾಗಿ ಮತ್ತೆ ಈಶಾನ್ಯಕ್ಕೆ ಬರುವಂತೆ ಮನೆ ಸುತ್ತಲೂ ಕಟ್ಟಬೇಕು. ಕೆಲವು ದೇಶಗಳಲ್ಲಿ ದರ್ಭೆ ಹಗ್ಗವನ್ನೂ ನೂಲಿನೊಡನೆ

ಕಟ್ಟುತ್ತಾರೆ. ಸುತ್ತಲೂ ಸುತ್ತುವಾಗ ರಕ್ಷೋಘ್ನ ಸೂಕ್ತ ಹಾಗೂ ಪವಮಾನ ಸೂಕ್ತವನ್ನು ಪಠಿಸಬೇಕು.

ತಂತ್ರಸಾರಸಂಗ್ರಹದಲ್ಲಿ ನಿರೂಪಿಸಿದಂತೆ ಬ್ರಹ್ಮಾದಿ 49 ದೇವತೆಗಳ ಆವಾಹನೆಗೆ ಅನುಗುಣವಾದ ಮಂಡಲವನ್ನು ರಚಿಸಬೇಕು ಅಥವಾ ಪ್ರಯೋಗಪಾರಿಜಾತದಲ್ಲಿ ನಿರೂಪಿಸಿದ 81ಕೋಣೆಗಳ ಮಂಡಲವನ್ನು ಬರೆದು 61ಭಾಗಗಳು ಉಂಟಾಗುವಂತೆ ವಿಭಜಿಸಿ ಐದು ಬಣ್ಣದ ರಂಗೋಲಿಗಳಿಂದ ಆಯಾಯ ಸ್ಥಾನದ ದೇವತೆಗಳಿಗೆ ಅನುಗುಣವಾದ ಬಣ್ಣಗಳಿಂದ ಪಾರಿಜಾತೋಕ್ತ ಕ್ರಮದಿಂದಲೇ ಪೂರಣೆಗೊಳಿಸಿ ಸಿಂಗರಿಸಬೇಕು. ಈ ವಾಸ್ತು ಮಂಡಲದಲ್ಲಿ ರೇಖಾದೇವತೆಗಳನ್ನೂ ಮಂಡಲ ದೇವತೆಗಳನ್ನೂ ಆವಾಹಿಸಿ ಆ ಮಂಡಲದ ಮೇಲೆ ಬ್ರಹ್ಮಾದಿ 53 ದೇವತೆಗಳಿಗೆ ಪ್ರತೀಕವಾಗಿ ತತ್ಸಮ ಸಂಖ್ಯಾಕವಾದ ಫಲತಂಡುಲ ವಸ್ತ್ರಕೂರ್ಚಾದಿಗಳನ್ನಿಟ್ಟು ವಾಸ್ತುಪ್ರತಿಮೆಯನ್ನು ಅಗ್ನ್ಯುತ್ತಾರಣವಿಧಿಯಿಂದ ಸಂಸ್ಕರಿಸಿ ಮಂಡಲಮಧ್ಯೆ ಸ್ವಸ್ತಿಕೆಯಲ್ಲಿಟ್ಟು ಪೂಜಿಸಬೇಕು.

ಬ್ರಹ್ಮಾದಿ ದೇವತೆಗಳನ್ನು ಆವಾಹಿಸಲು ಪ್ರತ್ಯೇಕ ವೇದೋಕ್ತ ಮಂತ್ರಗಳಿವೆ. ಪ್ರತಿಯೊಂದು ವೇದಮಂತ್ರವನ್ನೂ ನಾಮವನ್ನೂ ಹೇಳಿ ಬ್ರಹ್ಮಾದಿಗಳನ್ನು ಆವಾಹಿಸಬೇಕು. ಬ್ರಹ್ಮಾದಿ 49 ದೇವತೆಗಳ ಹೆಸರನ್ನೂ ಮಂಡಲದಲ್ಲಿ ಅವರ ಸ್ಥಾನವನ್ನೂ ಶ್ರೀಮನ್ಮಧ್ವಾಚಾರ್ಯರು ತಂತ್ರಸಾರ ಸಂಗ್ರಹದಲ್ಲಿ ನಿರೂಪಿಸಿದ್ದಾರೆ.

"ಪಂಚರಾತ್ರದಲ್ಲೇ ತಂತ್ರಸಾರ ಸಂಗ್ರಹದಲ್ಲಿ ಹೇಳಿದ ವಾಸ್ತು ದೇವತೆಗಳಿಗಿಂತ ಬೇರೆ ಹೆಸರಿನ ದೇವತೆಗಳನ್ನು ಉಲ್ಲೇಖಿಸಲಾಗಿದೆ. ಪ್ರಯೋಗಪಾರಿಜಾತದಲ್ಲಿ ಅದಕ್ಕಿಂತಲು ಭಿನ್ನವಾದ 53 ದೇವತೆಗಳನ್ನು ಹೆಸರಿಸಿ ಮಂಡಲ ವರ್ಣಗಳ ಸ್ಫುಟ ನಿರೂಪಣೆಯಿದೆ. ಇದರಲ್ಲಿ ಆಚಾರ್ಯರು ಹೇಳಿದ ಮೂವತ್ತಕ್ಕೂ ಹೆಚ್ಚು ದೇವತೆಗಳು ಸೇರುತ್ತಾರೆ. ಸುಮಾರು ಹದಿನೆಂಟು ದೇವತೆಗಳು ಸ್ವಲ್ಪಮಾತ್ರ ನಾಮ ವ್ಯತ್ಯಾಸದಿಂದ ನಿರೂಪಿಸಲ್ಪಟ್ಟಿದ್ದಾರೆ.

ತಂತ್ರಸಾರ ಸಂಗ್ರಹದ ವ್ಯಾಖ್ಯೆಯಾದ ತತ್ವಕಣಿಕೆಯಲ್ಲಿ ತಿಳಿಸಿದಂತೆ ದೇವಸ್ಥಾನದ ವಾಸ್ತುದೇವತೆಗಳಿಗೂ ಗೃಹ-ತಟಾಗಾದಿ ವಾಸ್ತುದೇವತೆಗಳಿಗೂ ವ್ಯತ್ಯಾಸವಿದೆ. ಹಾಗಾಗಿ ಸಂಪ್ರದಾಯದಲ್ಲಿ ಬಂದ ಪ್ರಯೋಗ ಪಾರಿಜಾತದ ವಿಧಿಯೂ ಆಚಾರ್ಯರಿಗೆ ಅಸಮ್ಮತವಲ್ಲ.

ವರದನೆಂಬ ಹೆಸರಿನ ಅಗ್ನಿಯನ್ನು ಪ್ರತಿಷ್ಠೆಮಾಡಿ 'ವಾಸ್ತೋಷ್ಪತೇ' ಮೊದಲಾದ ಋಗ್ವೇದದ ಐದು ಮಂತ್ರಗಳಿಂದ ಒಂದೊಂದೂ ಮಂತ್ರಗಳಿಂದ ಕಡಿಮೆಯೆಂದರೆ 28 ಬಾರಿ ಆಹುತಿ ನೀಡಬೇಕು. ವಾಸ್ತ್ವಧಿ ಷ್ಠಿತ ಬ್ರಹ್ಮಾದಿ ದೇವತೆಗಳಿಗೂ ಆಜ್ಯಾಹುತಿಯನ್ನು ನೀಡಬೇಕು.

ವಾಸ್ತುಹೋಮದ ಆಹುತಿ ದಾನಾದಿಗಳಲ್ಲಿ ಹಲವು ಬಗೆಯ ಪ್ರಯೋಗಗಳಿವೆ. ಪ್ರಯೋಗ ಪಾರಿಜಾತ, ತಂತ್ರಸಾರ ಸಂಗ್ರಹ, ಸಮುಚ್ಚಯ ಮುಂತಾದ ಗ್ರಂಥಗಳಲ್ಲಿ ಸಮಾನರೂಪತೆ ಕಾಣಿಸುವುದಿಲ್ಲ. ಈ ಹೋಮದಲ್ಲಿ ಪೂರ್ಣಾಹುತಿಯಿಲ್ಲವೆಂಬುದೂ ಒಂದು ಮತ. ಪೂರ್ಣಾಹುತಿಯನ್ನು ನಿಷೇಧಿಸುವ ಸ್ಮೃತಿ 'ಶಾಲಾಯಾಂ ವಾಸ್ತು ಪೂಜನೇ... ನ ಪೂರ್ಣಾಹುತಿರಿಷ್ಯತೇ' ಎನ್ನುತ್ತಿದೆ. ಇಲ್ಲಿಯ 'ಶಾಲಾಯಾಂ' ಎಂಬ ಮಾತು ಮತ್ತು 'ಇಷ್ಯತೇ' ಎಂಬ ಕ್ರಿಯಾ ಪದವನ್ನು ಗಮನಿಸಿದಾಗ ಗೃಹವಾಸ್ತುವಿನಲ್ಲಿ ಪೂರ್ಣಾಹುತಿ ಇದ್ದೇ ಇದೆ ಎಂಬ ಅಭಿಪ್ರಾಯವಾಗುತ್ತದೆ. ಹೀಗಾಗಿ ಸಾಂಪ್ರದಾಯಿಕ ಮತದಲ್ಲಿ ಪೂರ್ಣಾಹುತಿ ನೀಡಲಾಗುತ್ತದೆ. ಒಟ್ಟಿನಲ್ಲಿ ಗುರೂಪದಿಷ್ಟ ಕ್ರಮದಿಂದ ವಾಸ್ತುಹೋಮವನ್ನು ನಡೆಸಬೇಕು. ಭೂಖನನಾದಿ ಜನಿತ ಪಾತಕ ಪರಿಹಾರಕ್ಕಾಗಿ ಶಮೀಸಮಿಧೆಯಿಂದಲೂ, ವಂಶಾಭಿವೃದ್ಧಿಗಾಗಿ ಗರಿಕೆ ಯಿಂದಲೂ, ಯೋಗ-ಕ್ಷೇಮಾವಾಪ್ತಿಗಾಗಿ ಆಜ್ಯ-ಪಾಯಸಗಳಿಂದಲೂ, ಆರೋಗ್ಯ-ಧನ-ಧಾನ್ಯ ಸಮೃದ್ಧಿಗಾಗಿ ಗೋಧಿ-ಬತ್ತ ಮಿಶ್ರಿತ ತಿಲ ದಿಂದಲೂ ಆಹುತಿ ನೀಡಬೇಕು. ರಕ್ಷೆಗಾಗಿ ರಕ್ಷೋಘ್ನಹೋಮವನ್ನು ಮಾಡುವುದಾದರೆ ಬೇರೆಯೇ ಕುಂಡದಲ್ಲಿ ಬಲವರ್ಧನ ನಾಮಾಗ್ನಿಯನ್ನು ಸ್ಥಾಪಿಸಿ ಅದರಲ್ಲಿ ಮಾಡಬೇಕು.

ಅಗ್ನಿಯ ಈಶಾನ್ಯದಲ್ಲಿ ಎರಡು ಕಲಶಗಳನ್ನು ಸ್ಥಾಪಿಸಿ ಅವುಗಳಲ್ಲಿ ದಕ್ಷಿಣ ಕಲಶದಲ್ಲಿ ಧಾನ್ಯವನ್ನೂ ಉತ್ತರ ಕಲಶದಲ್ಲಿ ಜಲವನ್ನೂ ತುಂಬಬೇಕು. ವಾಸ್ತುಮಂತ್ರಗಳಿಂದ ಅಭಿಮಂತ್ರಿಸಬೇಕು.

## ವಾಸ್ತುಬಲಿ

ವಾಸ್ತುಹೋಮಾನಂತರ ವಾಸ್ತ್ವಧಿಷ್ಠಿತ ದೇವತೆಗಳಿಗೆ ಹಾಗೂ ದಿಕ್ಪಾಲಕರಿಗೆ ಪ್ರತ್ಯೇಕ ಪ್ರತ್ಯೇಕವಾಗಿ ಕೂಷ್ಮಾಂಡಲಾಜ ಸಹಿತ ಬಲಿಯನ್ನು ನೀಡಬೇಕು. ವಾಸ್ತುಪೂಜಾಮಂಡಲದ ಸನಿಹದಲ್ಲಿ ಗೋಮಯ ಲಿಪ್ತ ಪ್ರದೇಶದಲ್ಲಿ ರಂಗೋಲಿಯಿಂದ ವಾಸ್ತುಮಂಡಲದ 61 ಕೋಣೆಗಳನ್ನು ಪೂಜಾಮಂಡಲದಂತೆ ಬರೆದು ಅದರಲ್ಲಿ ಪ್ರತಿನಾಮವನ್ನೂ ಉಚ್ಚರಿಸುತ್ತಾ ಸ್ವಾಹಾಕಾರದೊಂದಿಗೆ ಬಲಿ ನೀಡಬೇಕು. ಇಲ್ಲಿ ಅಷ್ಟದಿಕ್ಪಾಲಕರಿಗೂ ಬಲಿ ಕೊಡಬೇಕು. ಇದಾದ ನಂತರ ಮನೆಯ ಹೊರಭಾಗದಲ್ಲೂ ಪೂರ್ವಾದಿ ಆಯಾಯ ದಿಕ್ಕಿನಲ್ಲಿ ಇಂದ್ರಾದಿ ದಶ ದಿಕ್ಪಾಲಕರಿಗೆ (ಅಧೋ ದಿಗಧಿಪತಿ ಅನಂತ(ಶೇಷ)ನಿಗೆ ನೈರ್ಋತ್ಯದಲ್ಲಿ, ಊರ್ಧ್ವಾಧಿಪತಿ ಬ್ರಹ್ಮನಿಗೆ ಈಶಾನ್ಯದಲ್ಲಿ) ದೀಪಸಹಿತ ಬಲಿಯಿತ್ತು ಗೃಹರಕ್ಷೆಗಾಗಿ ಪ್ರಾರ್ಥಿಸಿ ಈಶಾನ್ಯದಲ್ಲಿ ಕ್ಷೇತ್ರಪಾಲನಿಗೆ ಉಳಿದೆಲ್ಲಾ ಬಲಿದ್ರವ್ಯವನ್ನೂ ರಾಶಿಹಾಕಿ ಬಲಿಯನ್ನಿತ್ತು 'ಇದಂ ನ ಮಮ' ಎನ್ನಬೇಕು. ಈಶಾನ್ಯದಲ್ಲಿ ಒಟ್ಟು ಮೂರು ದೇವತೆಗಳಿಗೆ ಬಲಿ, ಈಶಾನರುದ್ರ, ಬ್ರಹ್ಮ ಹಾಗೂ ಕ್ಷೇತ್ರಪಾಲ. ಕೆಲವೆಡೆ ಅನಂತನಿಗೂ ಈಶಾನ್ಯದಲ್ಲೇ ಬಲಿ ನೀಡುವುದುಂಟು. ಆಗ ಅಲ್ಲಿ ನಾಲ್ಕು ಪತ್ರೆಗಳಲ್ಲಿ ಪ್ರತ್ಯೇಕ ಬಲಿ ನೀಡಬೇಕು.

ಬಲಿಪ್ರದಾನವಾದ ನಂತರ ಗೃಹ ಹಾಗೂ ಯಜಮಾನನಿಗೆ ಕ್ರೂರದೃಷ್ಟಿ ದೃಷ್ಟಿದೋಷಗಳ ನಿವೃತ್ತಿಗಾಗಿ ಕೂಷ್ಮಾಂಡ ಅಥವಾ ತೆಂಗಿನ ಕಾಯಿಯಿಂದ ನಿವಾಳಿಸಿ ದೃಷ್ಟಿ ತೆಗೆದು ಅದನ್ನು ಗೃಹಮುಂಭಾಗದಲ್ಲಿ ಕಲ್ಲಿಗೆ ಅಪ್ಪಳಿಸುವುದು ಸಂಪ್ರದಾಯಾಗತ ಕ್ರಮವಾಗಿದೆ.

ಆಮೇಲೆ ಸರ್ವರೂ ಹಸ್ತ, ಪಾದ, ಮುಖಗಳನ್ನು ತೊಳೆದು ಕೊಂಡು ಗೃಹಮುಂಭಾಗದಲ್ಲಿ 'ಶುಭಂ ವಾಸ್ತು' ಎಂದು ಬರೆದು ಮನೆಯೊಳಗೆ

ಬಂದು ಯಜ್ಞಾಗ್ನಿಗೆ ನಮಿಸಿ ಕಲಶಮಾರ್ಜನ ದಾನಾದಿ ಪ್ರಕ್ರಿಯೆಗಳನ್ನು ಮುಗಿಸಿ ಕೃಷ್ಣಾರ್ಪಣವೆನ್ನಬೇಕು.

ಹೀಗೆ ವಾಸ್ತುಹೋಮ-ಪೂಜಾ-ಬಲಿಕರ್ಮಗಳನ್ನು ಮುಗಿಸಿ ನೂತನ ಗೃಹದಲ್ಲಿ ವಿಪ್ರೋಚ್ಛಿಷ್ಟ ಪ್ರಕ್ರಿಯೆಯ ಅನುಸಂಧಾನದೊಡನೆ ಯಥಾಶಕ್ತಿ ವಿಪ್ರಭೋಜನವನ್ನು ನಡೆಸಬೇಕು. ಯಜಮಾನ ದಂಪತಿಗಳು ಮಾತ್ರ ಗೃಹಪ್ರವೇಶಕ್ಕಿಂತ ಮೊದಲು ಈ ಗೃಹದಲ್ಲಿ ಉಣ್ಣುವಂತಿಲ್ಲ. ಅವರು ಬೇರೆಡೆ (ಮನೆ ಹೊರಗಿನ ಚಪ್ಪರ ಮೊದಲಾದ ಉಚಿತ ಪ್ರದೇಶದಲ್ಲಿ)ಉಣ್ಣುತ್ತಾರೆ.

* * *

# ಗೃಹಪ್ರವೇಶ ವಿಧಿ

ವಾಸ್ತುಹೋಮಾದಿಗಳು ನಡೆದ ದಿನ ಅಥವಾ ಮರುದಿನದ ಶುಭಮುಹೂರ್ತದಲ್ಲಿ ಗೃಹಪ್ರವೇಶಲಗ್ನ ಕಾಲಕ್ಕಿಂತ ಸುಮಾರು ಮುಕ್ಕಾಲು ಗಂಟೆ ಮುಂಚಿತವಾಗಿ ಯಜಮಾನನು ಸಪತ್ನೀಕನಾಗಿ ಕೌಶೇಯಶುಭ್ರ ವಸ್ತ್ರಾದಿಗಳಿಂದ ಅಲಂಕೃತನಾಗಿ ಗೃಹದ ಪ್ರಧಾನದ್ವಾರದ ಮುಂಭಾಗದಲ್ಲಿ ಕುಳಿತು ನವಗ್ರಹ ಪೂಜೆಯೊಂದಿಗೆ ದ್ವಾರಲಕ್ಷ್ಮೀಪೂಜೆಯನ್ನು ಮಾಡಬೇಕು. ಆಗಲೇ ತುಲಸೀವೃಂದಾವನದಲ್ಲಿ ತುಲಸೀ ಸಸಿಯನ್ನು ನೆಟ್ಟು ತುಲಸೀ ಪೂಜೆಯೂ ನಡೆಯುತ್ತದೆ. ಯಜಮಾನ ಪತ್ನಿಯು ಹೊಸ್ತಿಲು ತೊಳೆದು ರಂಗವಲ್ಲಿಯಿಂದ ಅಲಂಕರಿಸಿ ದೀಪವಿಟ್ಟು ಲಕ್ಷ್ಮೀ ಸನ್ನಿಧಾನವನ್ನು ಚಿಂತಿಸಿ ನಮಿಸುತ್ತಾಳೆ. ಇಂದು ಮಾತ್ರ ಗೃಹದ ಹೊರಭಾಗದಲ್ಲಿ ಕುಳಿತು ಹೊಸ್ತಿಲು ಪೂಜೆ. ಗೃಹಪ್ರವೇಶಾನಂತರ ಹೊಸ್ತಿಲು ಪೂಜೆ ಒಳಗಿನಿಂದಲೇ.

ಸೋಪಾನದಲ್ಲಿ(ಮೆಟ್ಟಿಲಿನಲ್ಲಿ) ಧರಾದೇವಿಯನ್ನು ದ್ವಾರಬಂಧದಲ್ಲಿ ಲಕ್ಷ್ಮೀದೇವಿಯನ್ನು ಕವಾಟ(ಬಾಗಿಲು)ದಲ್ಲಿ ದುರ್ಗಾದೇವಿಯನ್ನೂ ಚಿಂತಿಸಬೇಕು. ಶುಭ್ರವಸ್ತ್ರದಿಂದ ದ್ವಾರವನ್ನು ಆಚ್ಛಾದಿಸಿ ಶ್ರೀಸೂಕ್ತ, ಶ್ರೀಶಗುಣದರ್ಪಣಾದಿಗಳಿಂದ ಶ್ರೀಲಕ್ಷ್ಮೀನಾರಾಯಣ ಅರ್ಚನೆ ನಡೆಯುತ್ತದೆ. ಲಗ್ನಸುಲಗ್ನತೆಗಾಗಿ ಫಲದಾನ. ನವಗ್ರಹಧಾನ್ಯದಾನ, ಹಿರಿಯರಿಗೆ ವಂದನೆ, ಕುಲದೇವತಾದಿಗಳ ಸ್ಮರಣೆ, ಮಂಗಳಾಷ್ಟಕ ಪಠಣ, ಸ್ವಸ್ತಿಸೂಕ್ತ, ಶಕುಂತ ಸೂಕ್ತಗಳ ಘೋಷದೊಂದಿಗೆ ಮಂಗಳವಾದ್ಯ ನಿನಾದದೊಂದಿಗೆ ಮಂಗಲದ್ರವ್ಯಾದಿಗಳನ್ನು ಕೈಯಲ್ಲಿ ಹಿಡಿದುಕೊಂಡು ಬಾಗಿಲಿಗೆ ಪರದೆಯಂತಿದ್ದ

ವಸ್ತ್ರವನ್ನು ತೆಗೆದು ಸುಮುಹೂರ್ತದಲ್ಲಿ ಒಳಪ್ರವೇಶಿಸ ಬೇಕು. ಇಲ್ಲಿ ಗಮನಿಸಬೇಕಾದ ಕೆಲವು ಅಂಶಗಳು –

* ಬಾಗಿಲ ಹೊಸ್ತಿಲಿನಲ್ಲಿ ಸೇರು, ಅಕ್ಕಿ, ಬೆಲ್ಲಗಳನ್ನು ಇಟ್ಟಿರಬೇಕು.
* ಮುಹೂರ್ತವನ್ನು ಹೇಳಿದ ಜ್ಯೋತಿಷಿಕರಿಗೆ ಗೌರವಸಂಭಾವನೆಯಿತ್ತು ಆಶೀರ್ವಾದ ಪಡೆದ ನಂತರವೇ ಗೃಹಪ್ರವೇಶ.
* ಕುಲದೇವತಾರ್ಚನೆ ಮಾಡುವ ಅರ್ಚಕರು ಅಥವಾ ಆ ಊರಿನವರು ಬಂದಿದ್ದಲ್ಲಿ ಅವರಿಗೆ ದಕ್ಷಿಣೆಯಿತ್ತು ಕುಲದೇವತಾಸೇವೆಯಾಗಿ ಕಿಂಚಿತ್ ಹಿರಣ್ಯವನ್ನು ಅರ್ಪಿಸಬೇಕು.
* ತಂದೆ–ತಾಯಿ, ಅಜ್ಜ–ಅಜ್ಜಿ, ಗ್ರಾಮಣೀ ಮುಂತಾದ ಹಿರಿಯರಿದ್ದಲ್ಲಿ ವಂದಿಸಿ ಅನುಜ್ಞೆ ಪಡೆದೇ ಗೃಹಪ್ರವೇಶನ.
* ವಿಪ್ರರನ್ನು ಮುಂದಿಟ್ಟುಕೊಂಡೇ ಗೃಹಪ್ರವೇಶ.
* ಯಜಮಾನನು ತಲೆಗೆ ಮುಂಡಾಸು ಧರಿಸಿ ಉತ್ತರೀಯದೊಂದಿಗೆ ತಿಲಕ ಪುಷ್ಪಹಾರಗಳಿಂದ ಅಲಂಕೃತನಾಗಿರುತ್ತಾನೆ. ಸ್ತ್ರೀಭಿಃ ಸ್ರಗ್ವೀ ಗೀತವಾದ್ಯೈರ್ವಿಶೇಚ್ಚ.
* ಯಜಮಾನಪತ್ನಿಯು ಕೌಶೇಯವಸ್ತ್ರ, ಪುಷ್ಪಾಭರಣಗಳಿಂದ ಭೂಷಿತೆಯಾಗಿ ಭದ್ರದೀಪವನ್ನು ಹಿಡಿದುಕೊಳ್ಳಬೇಕು. ಉಕ್ಕಿಸುವುದಕ್ಕಾಗಿ ಹಾಲನ್ನು ಈಕೆಯೇ ಹಿಡಿದುಕೊಳ್ಳಬೇಕೆಂದು ಕೆಲವೆಡೆ ಸಂಪ್ರದಾಯ.
* ಯಜಮಾನನು ಶಾಲಗ್ರಾಮಾದಿದೇವತಾ ಸಂಪುಷ್ಟವನ್ನು ಎರಡು ಕೈಯಲ್ಲಿ ನಾಭ್ಯೂರ್ಧ್ವಭಾಗದಲ್ಲಿ ಹಿಡಿದುಕೊಂಡು ಪತ್ನಿಯನ್ನು ಮುಂದೆ ಮಾಡಿ ಆಕೆಯ ಬಲಗಾಲಿನಲ್ಲಿ ಲಕ್ಷ್ಮೀನಾರಾಯಣ ಸನ್ನಿಧಾನವನ್ನು ಚಿಂತಿಸಿ ಆ ಕಾಲಿನಿಂದ ಹೊಸ್ತಿಲಲ್ಲಿದ್ದ ಸೇರು ಧಾನ್ಯವನ್ನು ಗೃಹದೊಳಗೆ ಚೆಲ್ಲಿಸಿ ಪ್ರವೇಶ ಮಾಡಿಸಿ ಬಲಗಾಲನ್ನು ಮುಂದೆ ಮಾಡಿಕೊಂಡು ಪ್ರವೇಶಿಸಬೇಕು.

* ಪೂರ್ಣಕುಂಭ, ಅರಶಿನ ಕುಂಕುಮಾದಿ ಮಂಗಲದ್ರವ್ಯ, ಧನಪೇಟಿಕಾ, ದವಸ ಧಾನ್ಯ, ಅಕ್ಕಿಮೂಟೆ, ಹಾಲು, ತೊಟ್ಟಿಲು, ಮಗು, ತೆಂಗಿನಕಾಯಿ, ಭಾಗವತ–ಸರ್ವಮೂಲಾದಿ ಸಚ್ಛಾಸ್ತ್ರ ಗ್ರಂಥಗಳು ಇವನ್ನೆಲ್ಲ ಬಂಧು ಸುಹೃದರು ಹಿಡಿದುಕೊಂಡು ಪ್ರವೇಶಿಸಬೇಕು.

* ಸುವಾಸಿನಿಯರು ಜಲಪೂರ್ಣಕುಂಭ(ಕೊಡ), ಹೂವು, ಕನ್ನಡಿ, ಪನ್ನೀರು ಮೊದಲಾದ ಪರಿಮಳ ದ್ರವ್ಯ, ಅರಳು, ಗೌರೀಪೂಜಾ ಸಂಭಾರಾದಿಗಳನ್ನು ಹಿಡಿದಿರುತ್ತಾರೆ. ಬರಿಗೈಯಲ್ಲಿ ನೂತನಗೃಹಪ್ರವೇಶವು ಸೊಗಸುವುದಿಲ್ಲ.

* ಈ ಸಮಯದಲ್ಲಿ ಗೋಪ್ರವೇಶವನ್ನೂ ಮಾಡಿಸುವ ಸಂಪ್ರದಾಯ ಕೆಲವೆಡೆ. ತುಳಸೀ ಗಿಡವನ್ನೂ ಕೆಲವರು ಗೃಹಾಂತಃ ಪ್ರವೇಶ ಮಾಡಿಸುವುದುಂಟು. ತುಳಸೀ ಬೃಂದಾವನದಲ್ಲಿ ತುಳಸೀ ಪ್ರತಿಷ್ಠೆಯಾದ ನಂತರ ಒಳ ಪ್ರವೇಶ ಮಾಡಿಸುವ ಅವಶ್ಯಕತೆಯಿಲ್ಲ.

"ಪುರೋಹಿತವರ್ಗದ ವೇದಘೋಷ–ಘಂಟಾನಾದದೊಡನೆ ಒಳಪ್ರವೇಶ ಮಾಡುತ್ತಾ ದೇವರ ಮನೆಗೂ ಬಲಗಾಲು ಮುಂದಿಟ್ಟು ಪ್ರವೇಶಿಸಿ ಮೊದಲೇ ಅಲಂಕೃತವಾಗಿದ್ದ ಪೀಠದಲ್ಲಿ ಶಾಲಗ್ರಾಮಾದಿಗಳ ನ್ನಿಟ್ಟು ತಲೆಗೆ ಧರಿಸಿದ ಉಷ್ಣೀಷವನ್ನು ತೆಗೆದು ದೇವರಿಗೆ ನಮಿಸುತ್ತಾನೆ. ಪತ್ನಿಯು ತಾನು ಹಿಡಿದು ತಂದ ಭದ್ರದೀಪವನ್ನು ದೇವರ ಬಲಭಾಗದಲ್ಲಿ ಡುತ್ತಾಳೆ. ಎಡಭಾಗದಲ್ಲೂ ಒಂದು ದೀಪವನ್ನು ಹಚ್ಚುತ್ತಾಳೆ. ಘೃತದೀಪವು ದೇವರ ಬಲಭಾಗದಲ್ಲೂ(ಅರ್ಥಾತ್ ನಮಗೆ ಎಡಭಾಗದಲ್ಲೂ) ತೈಲದೀಪವು ದೇವರ ಎಡದಲ್ಲೂ ಇರುವುದು ಉಚಿತ. ತೈಲದೀಪವನ್ನು ಮಾತ್ರ ಇಡುವುದಾದರೆ ದೇವರ ಬಲಭಾಗದಲ್ಲೇ ಇಡತಕ್ಕದ್ದು.

**ದೇವಸ್ಯ ದಕ್ಷಿಣೇ ಪಾರ್ಶ್ವೇ ದೀಪಂ ದದ್ಯಾತ್ ಯಥಾವಿಧಿ ।**
**ಘೃತದೀಪಂ ದಕ್ಷಿಣತಃ ತೈಲದೀಪಂ ಚ ವಾಮತಃ ॥**

ಭದ್ರದೀಪವು(ನಂದಾದೀಪ) ಎಂದೆಂದೂ ದೇವರ ಬಲಭಾಗ ದಲ್ಲಿರಬೇಕು.

ಇದೀಗ ಯಜಮಾನನು ವಾಸ್ತುಪುರುಷನಿಗೆ ಉತ್ತರಪೂಜೆಯನ್ನು ಮುಗಿಸಿ ಘೋರೋಪದ್ರವಗಳು ಶಾಂತವಾಗುವಂತೆಯೂ, ಶಾಂತಿ-ನೆಮ್ಮದಿಗಳು, ಆರೋಗ್ಯ-ಸೌಭಾಗ್ಯಗಳು ನೆಲೆಗೊಳ್ಳುವಂತೆಯೂ ಅನುಗ್ರಹಿಸುವಂತೆ ಪ್ರಾರ್ಥಿಸುತ್ತಾನೆ. ವಿಪ್ರರ ಮುಂದೆ ನಿಂತು **'ಶಿವಂ ವಾಸ್ತು' 'ಶುಭಂ ವಾಸ್ತು' 'ಸ್ಥಿರಂ ವಾಸ್ತು'** ಎಂದು ಮೂರು ಬಾರಿ ಹೇಳಿಸಿ ಪ್ರತಿಷ್ಠಾಮಂತ್ರದೊಂದಿಗೆ ವಾಸ್ತು ಮಂಡಲಕ್ಕೆ ಮಂತ್ರಾಕ್ಷತೆಯನ್ನು ಹಾಕಿ **'ಸುಪ್ರತಿಷ್ಠಿತಮಸ್ತು'** ಎನ್ನುತ್ತಾರೆ.

ವಾಸ್ತುಪುರುಷನಿಗೆ ಆವಾಹನೆಯಿದೆಯೇ ಹೊರತು ಉದ್ವಾಸನೆ ಯಿಲ್ಲ. ವಾಸ್ತುಮಂಡಲದಲ್ಲಿರುವ ಕೂರ್ಚ, ವಾಸ್ತುಪ್ರತಿಮೆ, ಪಂಚರತ್ನ ಇತ್ಯಾದಿಗಳನ್ನು ಗೃಹದ ಈಶಾನ್ಯಭಾಗದಲ್ಲಿ ನೆಲದ ಒಳಗೆ ಈಶಾನ್ಯ ಮುಖವಾಗುವಂತೆ ಪ್ರತಿಷ್ಠಾಪಿಸಿ ಮುಚ್ಚಬೇಕು.

**ತಮರ್ಚಯೇತ್ ಪ್ರಯತ್ನೇನ ಕರ್ಮ ದೈವಂ ಯಥಾ ಭವೇತ್ ।**
**ಅನರ್ಚಿತೇ ವಾಸ್ತುದೇವೇ ಕೃತಂ ಕರ್ಮಾಸುರಂ ಭವೇತ್ ॥**

ವಾಸ್ತುಪೂಜೆ ನಡೆಸದ ಮನೆಯಲ್ಲಿ ಮಾಡಿದ ಕರ್ಮಗಳೆಲ್ಲವೂ ಆಸುರ. ದೈವಕರ್ಮವಾಗಬೇಕಾದರೆ ಮನಃಪೂರ್ವಕ ವಾಸ್ತು ಪೂಜೆ ನಡೆಸಬೇಕು. (ತತ್ವಕಣಿಕಾ)

ಒಟ್ಟಿನಲ್ಲಿ ವಾಸ್ತುಶಾಂತಿಯು ಹಲವು ಅಂಗಕಾರ್ಯಗಳಿಂದ ಹಾಗೂ ಸಂಪ್ರದಾಯಗಳಿಂದ ಕೂಡಿದ ದೊಡ್ಡವಿಧಾನ. ಈ ವಿಧಿಯನ್ನು ನೂತನ ಗೃಹಪ್ರವೇಶದಂದು ಅವಶ್ಯ ನಡೆಸಬೇಕು. ವಾಸ್ತುಕಾರಿಕೆಯು ಹೇಳುವಂತೆ –

**ಅನೇನ ವಿಧಿನಾ ಯಸ್ತು ಪ್ರತಿಸಂವತ್ಸರಂ ಬುಧಃ ।**
**ಗೃಹೇ ವಾಯತನೇ ಕುರ್ಯಾತ್ ನ ಸ ದುಃಖಮವಾಪ್ನುಯಾತ್ ॥**

ಯಜಮಾನ ಪತ್ನಿಯು ಸುವಾಸಿನಿಯರೊಡಗೂಡಿ ಅಡಿಗೆ ಮನೆಯ ಅಗ್ನಿದಿಕ್ಕಿನಲ್ಲಿ ಪೂರ್ವ ಅಥವಾ ಪಶ್ಚಿಮಾಭಿಮುಖವಾಗುವಂತೆ ಒಲೆಯನ್ನಿಟ್ಟು ಅಲ್ಲಿ ಪ್ರಜ್ವಲಿತಾಗ್ನಿಗೆ ವಂದಿಸಿ ಒಲೆಯನ್ನು ಅಲಂಕರಿಸಿ ಅದರಲ್ಲಿ ಶುದ್ಧಪಾತ್ರೆಯಲ್ಲಿ ಹಾಲನ್ನಿಟ್ಟು ಲಕ್ಷ್ಮೀಶೋಭನೆ ಇತ್ಯಾದಿ ಮಂಗಲ ಪದ್ಯಗಳನ್ನು ಹಾಡುತ್ತಾಳೆ. ಉಕ್ಕಿಬಂದ ಹಾಲಿಗೆ ಸಕ್ಕರೆ ಸ್ವಲ್ಪ ತುಪ್ಪ ಹಾಗೂ ಪರಿಮಳ ದ್ರವ್ಯಗಳನ್ನು ಬೆರೆಸಿ ದೇವರಿಗೆ ನೈವೇದ್ಯಕ್ಕಿಡುತ್ತಾಳೆ. ಪ್ರವೇಶಕಾಲದಲ್ಲಿ ಬಂಧು ಜನರು ಹಿಡಿದು ತಂದಿದ್ದ ತೊಟ್ಟಿಲನ್ನು ಶಯನಗೃಹಕ್ಕೂ ಭಾಗವತಾದಿ ಗ್ರಂಥಗಳನ್ನು ಅಧ್ಯಯನ ಕೊಠಡಿಗೂ ಎಂಬಂತೆ ಆಯಾಯ ಸಮುಚಿತ ಸ್ಥಳಗಳಲ್ಲಿ ಇಡಿಸಬೇಕು.

ಯಜಮಾನನು ದೇವರಿಗೆ ಪುಷ್ಪಾರ್ಚನೆಯನ್ನು ಮಾಡಿ ಉಕ್ಕಿದ ಹಾಲನ್ನು ನೈವೇದ್ಯ ಮಾಡಿ ನೀರಾಜನದೊಂದಿಗೆ ಸಪತ್ನೀಕನಾಗಿ ನಮಿಸುತ್ತಾನೆ. ಹಿರಿಯರಿಗೆಲ್ಲಾ ಸಪತ್ನೀಪುತ್ರನಾಗಿ ವಂದಿಸಿ ಆಶೀರ್ವಾದ ಪಡೆಯುತ್ತಾನೆ. ನಿವೇದಿತ ಕ್ಷೀರವನ್ನು ಎಲ್ಲರಿಗೂ ಹಂಚಿ ತಾನೂ ಸಪತ್ನೀಕನಾಗಿ ಸ್ವೀಕರಿಸುತ್ತಾನೆ.

ವಾಸ್ತುಮಂಡಲದಲ್ಲಿ ವಾಸ್ತುಪುರುಷನಿಗೆ ಉತ್ತರ ಪೂಜೆಯನ್ನು ಸಲ್ಲಿಸಿ ಈ ಸದ್ಗೃಹದಲ್ಲಿ ವಾಸ್ತು ಸ್ಥಿರನಾಗುವಂತೆಯೂ, ಅನುಷ್ಠಾನಮಾಡಿದ ಕರ್ಮಗಳು ಸತ್ಫಲವನ್ನು ನೀಡುವಂತೆಯೂ, ಭೂತಪ್ರೇತಾದಿ ಪೀಡೆಯುಂಟಾಗದಂತೆಯೂ ಯಜಮಾನ ಪ್ರಾರ್ಥಿಸುತ್ತಾನೆ. ಪ್ರತಿ ವರುಷವೂ ವಾಸ್ತುಹೋಮವನ್ನು ನಡೆಸುವವರಿಗೆ ಶಾಂತಿ,ನೆಮ್ಮದಿಗೆ ಧಕ್ಕೆಯಿಲ್ಲ. ಕನಿಷ್ಠ ಹನ್ನೆರಡು ವರ್ಷಕ್ಕೊಮ್ಮೆಯಾದರೂ ಮನೆಗೆ ಸುಣ್ಣ ಬಣ್ಣ ಮಾಡಿಸಿ ವಾಸ್ತುಶಾಂತಿಯನ್ನು ಪ್ರಜ್ಞಾವಂತ ಮನುಷ್ಯ ಅವಶ್ಯ ನಡೆಸುತ್ತಾನೆ.

* * *

# ರಕ್ಷೋಘ್ನ ಹೋಮ

ಸುಸಂಸ್ಕೃತ ವ್ಯಕ್ತಿ ಸುಸಜ್ಜಿತಮನೆಯನ್ನು ಪ್ರವೇಶಿಸುವುದಕ್ಕೆ ಮುಂಚೆ ವಾಸ್ತುಹೋಮವನ್ನು ನಡೆಸುತ್ತಾನೆ. ರಕ್ಷೋಘ್ನಹೋಮವನ್ನೂ ಮಾಡಿಸುತ್ತಾನೆ.

ಸಾಮಾನ್ಯವಾಗಿ ಎಲ್ಲಾ ಹೋಮಗಳು ಗೃಹಪ್ರವೇಶವಾದ ನಂತರವೇ. ಪ್ರವೇಶಕ್ಕಿಂತ ಮೊದಲೇ ಮಾಡಬೇಕಾದ ಹೋಮವೆಂದರೆ ವಾಸ್ತು ಹಾಗೂ ರಕ್ಷೋಘ್ನ ಮಾತ್ರ. ಕೆಲವೇ ಕೆಲವೊಮ್ಮೆ ಸ್ಥಲದೋಷ ನಿವೃತ್ತಿಗಾಗಿ ಭೂವರಾಹಹೋಮ. ಸುಲಗ್ನತಾಸಿದ್ಧಿಗಾಗಿ ಗ್ರಹಶಾಂತಿ, ರಕ್ಷೆಗಾಗಿ ಸುದರ್ಶನಹೋಮ ಇವುಗಳನ್ನು ಮಾಡಲಾಗುತ್ತದೆ.

ಸಂಸ್ಕೃತದಲ್ಲಿ ರಾಕ್ಷಸ ಎಂಬ ಪುಲ್ಲಿಂಗ ಶಬ್ದವಿರುವಂತೆ 'ರಕ್ಷಸ್' ಎಂಬ ನಪುಂಸಕಲಿಂಗದ ಶಬ್ದವೂ ಇದೆ. ಇದಕ್ಕೂ ರಾಕ್ಷಸ ಶಬ್ದದ್ದೇ ಅರ್ಥ. ದುಷ್ಟಶಕ್ತಿಗಳೆನಿಸಿದ ರಕ್ಷಸ್ಸುಗಳನ್ನು ನಾಶ ಮಾಡುವ ಶಕ್ತಿಯುಳ್ಳ ಸೂಕ್ತವೊಂದು ಋಗ್ವೇದದಲ್ಲೂ ಯಜುರ್ವೇದದಲ್ಲೂ ಇದೆ. ಇದನ್ನು 'ರಕ್ಷೋಘ್ನ' ಎಂದು ಕರೆಯಲಾಗಿದೆ. ವೃತ್ರನನ್ನು ಕೊಂದವ ವೃತ್ರಘ್ನ ಅಥವಾ ವೃತ್ರಹಾ ಎನಿಸುತ್ತಾನೆ. ಶತ್ರುಹಂತಾರನು ಶತ್ರುಘ್ನ ಅಥವಾ ಶತ್ರುಹಾ. ಹಾಗೆಯೇ ರಕ್ಷಸ್ಸುಗಳ ನಾಶಕನು 'ರಕ್ಷೋಘ್ನ' ಅಥವಾ 'ರಕ್ಷೋಹಾ' ಎಂದು ಕರೆಸಿಕೊಳ್ಳುತ್ತಾನೆ. ಬಾಯಿಯಿಂದ ಅಗ್ನಿಯನ್ನು ಹುಟ್ಟಿಸಿದ ವಿರಾಟ್‌ಪುರುಷನು ಅಗ್ನಿಯಲ್ಲಿ ರಕ್ಷೋನಾಶಕರೂಪದಲ್ಲಿ ಸುದರ್ಶನನಾಗಿ ನಿಂತ. ಇವನಿಗೆ ರಕ್ಷೋಹಾಗ್ನಿ ಎಂದು ಹೆಸರು. ಇವನನ್ನು ಸ್ತುತಿಸುವ 'ಕೃಣುಷ್ವಪಾಜ' ಎಂದು ಆರಂಭವಾಗುವ ಹದಿನೈದು ಮತ್ತು ಮೂರು ಮಂತ್ರಗಳು ರಕ್ಷೋಘ್ನಸೂಕ್ತವೆನಿಸಿವೆ.

ವಸ್ತುತಃ ರಕ್ಷೋಘ್ನಹೋಮದಲ್ಲಿ ರಕ್ಷೋಘ್ನಸೂಕ್ತದಿಂದ ಮಾತ್ರ ಹೋಮವಲ್ಲ. ಪಂಚಾಗ್ನಿನೇತ್ರಮಂತ್ರ, ದುರ್ಗಾಮಂತ್ರ(ಜಾತವೇದಸೇ ಇತ್ಯಾದಿ ಪಂಚ) ಹಾಗೂ ಸುದರ್ಶನಾಸ್ತ್ರ ಮಂತ್ರಗಳಿಂದಲೂ ಆಹುತಿ ಯಿದೆ. ಈ ಎಲ್ಲಾ ಮಂತ್ರಗಳೂ ರಕ್ಷಸ್ಸುಗಳನ್ನು ದೂರೀಕರಿಸಿ ರಕ್ಷೆ ನೀಡುವ ಮಂತ್ರಗಳಾದ್ದರಿಂದ ರಕ್ಷೋಘ್ನಮಂತ್ರಗಳೇ. ಈ ಮಂತ್ರಗಳಿಂದ ಆಹುತಿ ನೀಡುವ ಹೋಮ ರಕ್ಷೋಘ್ನಹೋಮ.

ಎಲ್ಲಾ ರಕ್ಷಸ್ಸುಗಳೂ ಅನಿಷ್ಟಕಾರಿಗಳಲ್ಲ. ನೈರ್ಋತ್ಯಮೂಲೆಗೆ ಅಧಿಪತಿಯಾದ ನಿರ್ಋತಿಯೂ ಓರ್ವ ರಕ್ಷಸ್ಸು. ಅವನು ರಕ್ಷೋಧಿಪತಿ. ಬ್ರಹ್ಮಸುತ ಸ್ಥಾಣುವಿನ ಮಗನಾದ ಈತ ದೇವತೆಗಳೊಡನೆ ಯಜ್ಞದಲ್ಲಿ ಪೂಜ್ಯ. ಹಾಗಾಗಿ ರಕ್ಷಸ್ಸುಗಳು ಎರಡು ಬಗೆಯವು. ಭೂತ–ಪ್ರೇತ–ಪಿಶಾಚಿಗಳಿಗೆ ಸಮನಾದ ರಕ್ಷಸ್ಸು ಎಂದು ದುಷ್ಟಗಣವೊಂದಿದೆ. ಹಾಗೆಯೇ ಯಕ್ಷ–ಗಂಧರ್ವ–ನಾಗ–ಪಿತೃಗಳಂತೆ ರಕ್ಷಸ್ ಎಂಬ ದೇವಗಣವೂ ಇದೆ. ಈ ದೇವಗಣವನ್ನು ಓಡಿಸುವುದು ರಕ್ಷೋಘ್ನ ಮಂತ್ರದ ಉದ್ದೇಶವಲ್ಲ.

'ದುಷ್ಟರಕ್ಷಸ್ಸುಗಳ ಉತ್ಪತ್ತಿಯ ಬಗೆಗೆ ಬ್ರಹ್ಮಾಂಡ ಪುರಾಣದ ಉತ್ತರಾರ್ಧದಲ್ಲಿ ಹೀಗೊಂದು ಕಥೆಯಿದೆ. ಕಶ್ಯಪಪ್ರಜಾಪತಿಗಳಿಗೆ 'ಖಶಾ' ಎಂಬ ಪತ್ನಿಯಲ್ಲಿ ಇಬ್ಬರು ಮಕ್ಕಳು ಜನಿಸಿದ್ದಾರೆ. ಒಬ್ಬ ಸಾಯಂಸಂಧ್ಯೆ ಯಲ್ಲಿ ಹುಟ್ಟಿದ್ದರೆ ಇನ್ನೊಬ್ಬ ಪ್ರಾತಃಸಂಧ್ಯೆಯಲ್ಲಿ ಜನಿಸಿದ. ಇಬ್ಬರದೂ ವಿಚಿತ್ರ ಭಯಂಕರ ರೂಪ. ಮೈಯೆಲ್ಲ ಕೂದಲು. ಮುಂಬಂದ ಕೋರೆ ಹಲ್ಲು. ಹುಟ್ಟಿದ ಕೆಲಕ್ಷಣದಲ್ಲೇ ಇವರು ದೀರ್ಘಕಾಯರಾಗಿ ಬೆಳೆದರು. ಹಸಿವು ಬಾಧಿಸತೊಡಗಿತು. ಮೊದಲ ಮಗ ತಾಯಿಯನ್ನೇ ಹಿಡಿದೆಳೆದ. ಹಸಿವೆಯಿಂದ ತಿಂದುಬಿಡೋಣವೆಂದ. ಎರಡನೆಯವ ತಾಯಿಯನ್ನು ಬಿಡಿಸಿ ಭುಜಪಂಜರದಲ್ಲಿ ಅವುಚಿಕೊಂಡು "ಮಾತೃದೇವತೆಯೆನಿಸಿದ ಈಕೆಯನ್ನು ತಿನ್ನದಿರು. ರಕ್ಷಿಸೋಣ" ಎಂದ. ಹೀಗೆ ಅಣ್ಣ 'ಜಕ್ಷಾವ' (ತಿನ್ನೋಣ) ಎಂದ. ತಮ್ಮ 'ರಕ್ಷಾವ' (ರಕ್ಷಿಸೋಣ) ಎಂದ. ಈ ಹೊತ್ತಿಗೆ ಪ್ರಜಾಪತಿಗಳ ಆಗಮನವಾಯಿತು. ಎರಡು ಮಕ್ಕಳು ಹೆದರಿ ತಾಯಿಯ ಸೆರಗಿನಲ್ಲಿ ಅಡಗಿಕೊಂಡವು. 'ಏನು ನಡೆಯುತ್ತಿದೆ? ತಂದೆ ಪ್ರಶ್ನಿಸಿದ.

ಘಟನೆ ತಿಳಿದು 'ಜಕ್ಷಾವ' ಎಂದ ಮಗನನ್ನು ಜಕ್ಷ(ಯಕ್ಷ) ಎಂದು ಹೆಸರಿಸಿದ. 'ರಕ್ಷಾವ' ಎಂದವನಿಗೆ 'ರಕ್ಷಸ್' ಎಂದು ನಾಮಕರಣ ಮಾಡಿದ. ಮುಂದೆ ಈ ರಕ್ಷಸ್ ಬೇಟೆಗಾಗಿ ಹೋದವ ಅಜ ಹಾಗು ಕಂಡ ಎಂಬ ಪಿಶಾಚಗಳ ಕನ್ಯೆಯರಾದ ಜಂತುಧನಾ ಹಾಗು ಬ್ರಹ್ಮಧನಾ ಎಂಬ ಹೆಣ್ಣುಗಳನ್ನು ಪೈಶಾಚವಿಧಿಯಿಂದ ವಿವಾಹವಾಗಿ ರಕ್ಷಸ್ಸುಗಳ ವಂಶವನ್ನು ವೃದ್ಧಿಸಿದ.

ಹೀಗೆ ರಾಕ್ಷಸರಕ್ಷಸ್ಸು ಹಾಗೂ ದೇವರಕ್ಷಸ್ಸು ಎಂದು ರಕ್ಷಸ್ಸುಗಳಲ್ಲಿ ಎರಡು ಜಾತಿ. ರಾಕ್ಷಸಭಾವದ ರಕ್ಷಸ್ಸುಗಳ ನಿರಾಸಕ್ಕಾಗಿ ಸ್ಮೃತಿವಿಹಿತವಾದುದು ಈ ರಕ್ಷೋಘ್ನಹೋಮ.

ಪುರಾಣಗಳಲ್ಲಿ ನಾವು ಕೇಳುವಂತೆ ದೇವತೆಗಳು ಹಾಗು ರಾಕ್ಷಸರು ಪ್ರತ್ಯಕ್ಷವಾಗಿ ಹೋರಾಡುತ್ತಾರೆ. ಅವೆಲ್ಲ ಕಲಿಯುಗದ ಕಥೆಯಲ್ಲ. ಕಲಿಯುಗದಲ್ಲಿ ದೇವತೆಗಳೂ ಪ್ರತ್ಯಕ್ಷರಲ್ಲ. ರಾಕ್ಷಸರೂ ಅಲ್ಲ. ಇವರು ನಮ್ಮ ಒಳಗಿದ್ದೇ ತಮ್ಮತಮ್ಮ ಸ್ವಭಾವಕ್ಕನುಗುಣವಾದ ಕೃತ್ಯಗಳನ್ನು ನಡೆಸುತ್ತಾರೆ. ರಾಕ್ಷಸರ ಆವೇಶದಿಂದ ಕೆಟ್ಟಕೆಲಸಗಳು ಅಥವಾ ಕೆಟ್ಟ ಯೋಚನೆಗಳು ನಡೆಯುತ್ತವೆ. ಅಶಾಂತಿ ಅತೃಪ್ತಿಗಳು ಮನೆಮಾಡುತ್ತವೆ. ಅದಕ್ಕಾಗಿ ನಮ್ಮೊಳಗಿನ ರಕ್ಷಸ್ಸುಗಳನ್ನು ಓಡಿಸಬೇಕು. ಮನೋಗತವಾದ ದುಷ್ಟಶಕ್ತಿಗಳನ್ನು ಓಡಿಸುವುದರೊಂದಿಗೆ ಅಂತಃಕರಣಶುದ್ಧಿ ಸಂಪಾದನೆಯ ಶಕ್ತಿಯುಳ್ಳ ಮಂತ್ರ ರಕ್ಷೋಘ್ನಸೂಕ್ತ.

ರಕ್ಷೋಘ್ನಸೂಕ್ತ ಪ್ರತಿಪಾದ್ಯನಾದ ರಕ್ಷೋಹನು ಓರ್ವ ಅಗ್ನಿಯಾದ್ದರಿಂದ ಈ ಹೋಮವನ್ನು ಗೃಹದ ಅಗ್ನಿಮೂಲೆಯಲ್ಲಿಯೂ ವಾಸ್ತುಪೂಜೆಯನ್ನು ವಾಸ್ತುಪುರುಷನ ಶಿರಸ್ಸಿನ ದೇಶವಾದ ದೇವಮೂಲೆ (ಈಶಾನ್ಯ)ಯಲ್ಲಿಯೂ ನಡೆಸಬೇಕೆಂಬುದು ಕೆಲವೆಡೆಯ ಸಂಪ್ರದಾಯ.

* * *

# ಸುದರ್ಶನ ಹೋಮ

ಮೂರು ಉದ್ದೇಶಗಳಿಂದ ಸುದರ್ಶನ ಹೋಮವನ್ನು ನಡೆಸುವು ದಿದೆ. ಗೃಹರಕ್ಷೆಗಾಗಿ, ಅಭಿಚಾರಕೃತ್ಯ ನಿವಾರಣೆಗಾಗಿ ಹಾಗೂ ವೈಷ್ಣವದೀಕ್ಷಾ ಮುದ್ರಾಧಾರಣೆಗಾಗಿ. ಆದ್ದರಿಂದಲೇ ಈ ಹೋಮದ ಪ್ರಧಾನಾಹುತಿ ದ್ರವ್ಯಗಳಲ್ಲೂ ಮಂತ್ರದಲ್ಲೂ ಹಲವು ಬಗೆಗಳು ಚಾಲ್ತಿಯಲ್ಲಿವೆ.

ಭಗವಂತನ ಬಲಗೈಯಲ್ಲಿರುವ ಚಕ್ರ ಸುದರ್ಶನ. ಭಕ್ತರನ್ನು ಪೊರೆಯುವ, ದುರುಳರನ್ನು ಶಿಕ್ಷಿಸುವ ಅಭಯಾಸ್ತ್ರ.

ಸೂರ್ಯನ ಪತ್ನಿ ಸಂಜ್ಞಾದೇವಿಗೆ ಸೂರ್ಯನ ಬಿಸಿಯನ್ನು ಸಹಿಸಲಾಗಲಿಲ್ಲ. ಸಂಸಾರದಲ್ಲಿ ಬಿರುಕು ಬಿತ್ತು. ಸೂರ್ಯನ ಮಾವ ತ್ವಷ್ಟೃಪ್ರಜಾಪತಿ ಸೂರ್ಯತೇಜಸ್ಸನ್ನು ಕೊರೆದು ತೆಗೆದು ಸುದರ್ಶನ ಚಕ್ರವನ್ನು ನಿರ್ಮಿಸಿದ ಎಂಬ ಕಥೆ ಹರಿವಂಶದಲ್ಲಿದೆ.

ಭಗವಂತನ ಕೈಯಲ್ಲಿ ಮೊದಲೇ ಇದ್ದ ಸಹಸ್ರಾರದಲ್ಲಿ ಈ ತ್ವಾಷ್ಟ್ರಸುದರ್ಶನವೂ ಸೇರಿ ಒಂದಾಯಿತು. ವಿರಾಟ್ ಪುರುಷನ ಮನಸ್ಸಿನಿಂದ ಮೊದಲೇ ಆವಿರ್ಭವಿಸಿದ್ದ ಚಂದ್ರನಲ್ಲಿ ಸಮುದ್ರಮಥನದಿಂದ ಹುಟ್ಟಿದ ಚಂದ್ರನು ಸೇರಿ ಒಂದಾದಂತೆ.

ಬೆಳಕಿನ ಪುಂಜವೆನಿಸಿದ ಈ ಸುದರ್ಶನ ಒಳಕತ್ತಲೆಯನ್ನು ಹೊಡೆಯುವವ. ಅದಕ್ಕಾಗಿಯೇ ಈತನನ್ನು 'ಅಜ್ಞಾನದಿಂದ ಕುರುಡನಾದ ನನಗೆ ವಿಷ್ಣುಮಾರ್ಗವನ್ನು ತೋರು' ಎಂದು ಪ್ರಾರ್ಥಿಸಲಾಗುತ್ತದೆ.

**ಸುದರ್ಶನ ಮಹಾಜ್ವಾಲ ಕೋಟಿಸೂರ್ಯಸಮಪ್ರಭ ।**
**ಅಜ್ಞಾನಾಂಧಸ್ಯ ಮೇ ನಿತ್ಯಂ ವಿಷ್ಣೋರ್ಮಾರ್ಗಂ ಪ್ರದರ್ಶಯ ॥**

ಸುದರ್ಶನವನ್ನು ಭಗವಂತ ಬಳಸಿದ ಸಂದರ್ಭಗಳನ್ನೆಲ್ಲಾ ಗಮನಿಸಿದರೆ ಅದು ಅಭಿಚಾರ ಮೊದಲಾದ ಮಾಯಾಶಕ್ತಿ ನಿವಾರಕ ಹಾಗೂ ಭಕ್ತರಕ್ಷಕವೆಂಬುದು ಸ್ಫುಟವಾಗುತ್ತದೆ. ಭಕ್ತ ಅಂಬರೀಷನ ಮೇಲೆ ದೂರ್ವಾಸರು ಕೃತ್ಯೆಯನ್ನು ಪ್ರಯೋಗಿಸಿದಾಗ ದೇವ ಸುದರ್ಶನದಿಂದ ಕೃತ್ಯದ ಭೂತವನ್ನು ನಾಶಗೊಳಿಸಿ ದೂರ್ವಾಸರನ್ನೂ ಲೋಕದಲ್ಲೆಲ್ಲಾ ಓಡಾಡಿಸಿ ಭಕ್ತನನ್ನು ಪೊರೆದ.

ದುರುಳ ಹಿರಣ್ಯಾಕ್ಷ ಮಾಯಾಯುದ್ಧವನ್ನು ಆರಂಭಿಸಿದಾಗ ದೇವ ವರಾಹನು ಸುದರ್ಶನದಿಂದ ಮಾಯೆಯನ್ನು ಶಾಂತಗೊಳಿಸಿದ.

ಪಂಚಪಾಂಡವರ ಮೇಲೆ ಹಾಗೂ ಉತ್ತರೆಯ ಗರ್ಭದ ಮೇಲೆ ಬ್ರಹ್ಮಶಿರೋಸ್ತ್ರವು ನುಗ್ಗಿ ಬರುತ್ತಿರುವಾಗ ಸುದರ್ಶನದಿಂದ ಅಸ್ತ್ರವನ್ನು ಶಮನಗೊಳಿಸಿದ. ಭೀಷ್ಮರ ಮುಂದೆ ಇದೇ ಚಕ್ರವನ್ನು ಹಿಡಿದು ತಾನು ಚಕ್ರಪಾಣಿ ನಾರಾಯಣನೆಂಬುದನ್ನು ಜಗಜ್ಜಾಹೀರುಗೊಳಿಸಿ ಭೀಷ್ಮರ ಪ್ರತಿಜ್ಞೆಯನ್ನು ಈಡೇರಿಸಿ ಭಕ್ತನ ಮಾತು ಉಳಿಸಿದ.

ಒಂದೊಮ್ಮೆ ಅಶ್ವತ್ಥಾಮನು ಈ ಚಕ್ರವನ್ನು ಲಪಟಾಯಿಸಲು ಪ್ರಯತ್ನಿಸಿ ಎತ್ತಲಾಗದೆ ಬೆವರಿಳಿಸಿಕೊಂಡಿದ್ದ.

ತಮೋಭಿಮಾನಿನಿಯಾದ ದುರ್ಗಾದೇವಿ ಸುದರ್ಶನಕ್ಕೆ ಅಭಿಮಾನಿನಿ. ಕಾಮದೇವನಿಂದಲೂ ಅಭಿಮನ್ಯಮಾನವಾದ ಈ ಚಕ್ರದಲ್ಲಿ ಭಗವಂತನ ಸುದರ್ಶನವೆಂಬ ರೂಪವಿದೆ. ಈ ರೂಪ ಅರಿಭಯಂಕರ ವಾದುದು. ಉಗ್ರನರಸಿಂಹನಂತೆ ಪ್ರಲಯಾಗ್ನಿಯಂತೆ ಪ್ರಜ್ವಲಿಸುವಂಥದು. ಆದ್ದರಿಂದಲೇ ನರಸಿಂಹನಿಗಿರುವಂತೆ ಈ ಸುದರ್ಶನನಿಗು ಮೂರು ಕಣ್ಣು. ಈತನ ಧ್ಯಾನಶ್ಲೋಕವೊಂದು ಹೀಗಿದೆ –

**ಮಧ್ಯಾಹ್ನ ಸೂರ್ಯಪ್ರತಿಮಪ್ರಕಾಶಂ**
**ಪಿಶಂಗಕೇಶಂ ಸ್ಫುರದಟ್ಟಹಾಸಮ್ ।**
**ತ್ರ್ಯಕ್ಷಂ ಪ್ರದೀಪ್ತಾಂಬರಮಗ್ರ್ಯಮೀಳೇ**
**ಚಕ್ರಸ್ಥಿತಂ ಚಕ್ರಿಣಮಷ್ಟಬಾಹುಮ್ ॥**

ಚಕ್ರಧಾರಿಯಾದ ದೇವ ಚಕ್ರದಲ್ಲಿ ನೆಲೆ ನಿಂತಿದ್ದಾನೆ. ಈತನಿಗೆ ಎಂಟು ತೋಳುಗಳು. ನಟ್ಟನಡುಮಧ್ಯಾಹ್ನದ ಸೂರ್ಯನಿಗೆ ಸಮನಾದ ಪ್ರಕಾಶ ಈತನದು. ಕೆಂಚು ತಲೆಗೂದಲು. ಗಹಗಹಿಸುವ ಅಟ್ಟಹಾಸದ ಮುಖದಲ್ಲಿ ಮೂರುಕಣ್ಣುಗಳು. ಝಗಝಗಿಸುವ ವಸ್ತ್ರಭೂಷಣಗಳ ಅಗ್ರಗಣ್ಯ ದೇವ ಸುದರ್ಶನನನ್ನು ಧ್ಯಾನಿಸಲಾಗಿದೆ.

**'ಕಲ್ಪಾಂತಾರ್ಕಪ್ರಕಾಶಂ ತ್ರಿಭುವನಮಖಿಲಂ ತೇಜಸಾ ಪೂರಯಂತಂ ರಕ್ತಾಕ್ಷಂ ಪಿಂಗಕೇಶಂ ರಿಪುಗಣಭಯದಂ ಭೀಮದಂಷ್ಟ್ರಾಟ್ಟಹಾಸಮ್'** ಎಂಬ ವರ್ಣನೆಯೊಂದಿಗೆ ಎಂಟು ತೋಳುಗಳಲ್ಲಿರುವ ಆಯುಧಗಳ ಬಗ್ಗೆ ಇನ್ನೊಂದು ಧ್ಯಾನಶ್ಲೋಕ ಉಲ್ಲೇಖಿಸಿದೆ.

**ಶಂಖಂ ಚಕ್ರಂ ಗದಾಬ್ಜೇ ಪೃಥುತರ-**
**ಮುಸಲಂ ಚಾಪಪಾಶಾಂಕುಶಾದೀನ್**
**ಬಿಭ್ರಾಣಂ ದೋರ್ಭಿರಾಢ್ಯಂ ಮನಸಿ**
**ಮುರರಿಪುಂ ಭಾವಯೇ ಚಕ್ರರಾಜಮ್ ॥**

ಶಂಖ, ಚಕ್ರ, ಗದಾ, ಪದ್ಮ, ಒನಕೆ, ಧನುಸ್ಸು, ಪಾಶ, ಅಂಕುಶಗಳನ್ನು ಧರಿಸಿದ ಕೈಗಳುಳ್ಳ ಚಕ್ರರಾಜ ಮುರಾರಿಯನ್ನು ಚಕ್ರದಲ್ಲಿ ಧ್ಯಾನಿಸಬೇಕು.

ಇಂತಹ ಸುದರ್ಶನ ರೂಪೀ ಪರಮಾತ್ಮನನ್ನು ಉದ್ದೇಶಿಸಿ ನಡೆಸುವ ಹೋಮ ಸುದರ್ಶನ ಹೋಮ.

ನೂತನಗೃಹದಲ್ಲಿ ನಡೆಸುವಾಗ ಹಾಗೂ ರಕ್ಷಾಸಿದ್ಧಿಗಾಗಿ ನಡೆಸುವ ಸುದರ್ಶನ ಹೋಮದಲ್ಲಿ ಎಂಟು ದ್ರವ್ಯಗಳಿಂದ ಆಹುತಿ ನೀಡಲಾಗುತ್ತದೆ.

ಅವೆಂದರೆ ಸರ್ಪಿ(ತುಪ್ಪ), ಉತ್ತರಣೆ ಕಡ್ಡಿ, ತಿಲ, ಸಾಸಿವೆ, ಪಾಯಸ, ಪಂಚಗವ್ಯ, ಅಕ್ಕಿ ಅಥವಾ ಲಾಜ ಹಾಗೂ ಆಜ್ಯ. ಯೋಗಕ್ಷೇಮಗಳೆಂಬ ಫಲವನ್ನು ಉದ್ದೇಶಿಸಿ ಆದ್ಯಂತಗಳಲ್ಲಿ ಆಜ್ಯಹೋಮ, ಅಭಿಚಾರ ದೋಷನಿವೃತ್ತಿಗಾಗಿ ಅಪಾಮಾರ್ಗಸಮಿಧೆ(ಉತ್ತರಣೆ ಕಡ್ಡಿ), ದುರಿತ ನಿವಾರಣೆಗಾಗಿ ತಿಲ, ಭೂತಪ್ರೇತಾದಿ ದುಷ್ಟಪರಿವಾರನಿಗ್ರಹಕ್ಕಾಗಿ ಸಾಸಿವೆ. ಭೋಗಸಿದ್ಧಿಗಾಗಿ ಪಾಯಸ, ಸ್ಥಲಶುದ್ಧಿಗಾಗಿ ಪಂಚಗವ್ಯ ಹಾಗೂ ಸಂತತ್ಯಾನಂದಾದ್ಯಭ್ಯುದಯಕ್ಕಾಗಿ ಲಾಜ ಅಥವಾ ಅಕ್ಕಿಯಿಂದ ಆಹುತಿ ನೀಡಲಾಗುತ್ತದೆ. ಪ್ರತಿದ್ರವ್ಯದಿಂದಲೂ 126 ಸಂಖ್ಯೆಯಲ್ಲಿ ಆಹುತಿ. ಎಂಟು ದ್ರವ್ಯಗಳಿಂದ 126ರಂತೆ ಆಹುತಿಯಿತ್ತಾಗ ಒಟ್ಟು 1008 ಎಂಬ ಪೂರ್ಣಸಂಖ್ಯೆಯುಂಟಾಗುತ್ತದೆ.

## ಸುದರ್ಶನ ಮಂತ್ರ

ಸುದರ್ಶನನಿಗೆ ಸಂಬಂಧಿಸಿದಂತೆ ಹಲವು ಮೂಲಮಂತ್ರಗಳಿವೆ. ಮಧ್ವಮಂತ್ರರತ್ನಾಕರದಲ್ಲಿ ಮೂರು ಸುದರ್ಶನ ಮಂತ್ರಗಳನ್ನು ಉಲ್ಲೇಖಿಸಲಾಗಿದೆ. ಇದರಲ್ಲಿ ಅಸ್ತ್ರಮಂತ್ರ ಹಾಗೂ ಮಾಲಾಮಂತ್ರ ಯಜ್ಞಗಳಲ್ಲಿ ವಿನಿಯುಕ್ತವಾಗಿದೆ. ನೂರೆಂಟು ಅಕ್ಷರದ ಸುದರ್ಶನ ಮಾಲಾಮಂತ್ರವು ಮಧ್ವಮಂತ್ರರತ್ನಾಕರದಲ್ಲಿ ಉಲ್ಲೇಖಿಸಲ್ಪಡದಿದ್ದರೂ ಸಮುಚ್ಚಯಾದಿ ಗ್ರಂಥಗಳಲ್ಲಿ ಉಪಲಬ್ಧವಿದೆ. ಮೂರು ಬೀಜದೊಡನೆ ಆರಂಭವಾಗುವ ಈ ಮಂತ್ರ ಆರಂಭದಲ್ಲಿ ಗೋಪೀಜನವಲ್ಲಭ ಗೋವಿಂದ ಕೃಷ್ಣನನ್ನು ನಮಿಸುತ್ತಾ ಮಧ್ಯೆ ಶತ್ರುಗಳಿಂದ ಪ್ರಯುಕ್ತಗಳಾದ ಮಂತ್ರ, ಯಂತ್ರ, ವಿಷೌಷಧ, ಶಸ್ತ್ರಗಳಿಂದ ರಕ್ಷೆಯನ್ನೂ, ಮೃತ್ಯುಭೀತಿಯಿಂದ ಮುಕ್ತಿಯನ್ನೂ ಪ್ರಾರ್ಥಿಸಿ ಕೊನೆಗೆ ಬೆಳಗುವ ಜ್ವಾಲಾಮಾಲಿಯಾದ ಸುದರ್ಶನನಿಗೆ '**ನಮೋ**' ಎನ್ನುತ್ತಾ '**ಹುಂಫಟ್**' ಎಂಬ ಅಸ್ತ್ರಬೀಜದೊಡನೆ ಮುಗಿಯುತ್ತದೆ. ಶೀಘ್ರ ಫಲದಾಯಕವಾದ ಶಕ್ತಿಶಾಲೀ ಮಂತ್ರವಿದು.

## ಸುದರ್ಶನ ಯಂತ್ರ

ಸುದರ್ಶನ ಹೋಮದ ಅಂಗವಾಗಿ ಸುದರ್ಶನ ಯಂತ್ರವನ್ನು ಬರೆದು ಪೂಜಿಸಬೇಕು. ಪಂಚವರ್ಣಾತ್ಮಕವಾದ ಮಂಡಲದಲ್ಲಿ ಯಂತ್ರ ಬರೆದು ಪೂಜಿಸಲಾಗುತ್ತದೆ. ತಾಮ್ರದ ಹಲಗೆಯಲ್ಲೂ ಯಂತ್ರ ಬರೆದು ಪೂಜಿಸುವುದಿದೆ. ಹೋಮರಕ್ಷೆಯನ್ನು ಆ ತಾಮ್ರದ ಯಂತ್ರಕ್ಕೆ ಹಚ್ಚಿ ಮನೆಯಲ್ಲಿಟ್ಟರೆ ದೇಹಕ್ಕೆ ತಾಯತದಂತೆ ಗೇಹಕ್ಕೆ ರಕ್ಷಾಪ್ರದವಾಗಿದೆ.

ಮಧ್ಯದಲ್ಲಿ ಬಿಂದು ನಂತರ ಷಟ್ಕೋನ ಸುತ್ತಲು ಸತ್ವರಜಸ್ತಮಸ್ಸುಗಳು ಮುಂದೆ ಅಷ್ಟದಲಪದ್ಮ ನಂತರ ಹದಿನಾರು ದಲದ ಪದ್ಮ ಕೊನೆಯಲ್ಲಿ ಅರಗಳನ್ನು ಬರೆದು ಭೂಪುರ ರಚಿಸಿದಾಗ ಸುದರ್ಶನ ಯಂತ್ರದ (ಮಂಡಲದ) ರಚನೆಯಾಗಿದೆ. ಇದರಲ್ಲಿ ಯಂತ್ರಗಾಯತ್ರೀ, ಮಂತ್ರ ಗಾಯತ್ರೀ, ಸುದರ್ಶನಾಸ್ತ್ರ, ಬೀಜ, ಸುದರ್ಶನ ಮಾಲಾಮಂತ್ರ ಹಾಗೂ ಮಾತೃಕಾ ಬೀಜಗಳನ್ನು ಬರೆದು ಪೂಜಿಸುವಿಕೆಗೆ ಯಂತ್ರಪೂಜೆಯೆಂದು ಹೆಸರು. ಪೂಜಿತವಾದ ಯಂತ್ರದ ಮೇಲೆಯೇ ಅಗ್ನಿಪ್ರತಿಷ್ಠೆ ಮಾಡಿ ಹೋಮ ನಡೆಸುವುದೂ ತಾಂತ್ರಿಕರಲ್ಲಿ ಪ್ರಸಿದ್ಧವಾಗಿದೆ.

ಮನುಷ್ಯನ ದುಃಖ–ದ್ವೇಷಗಳಿಗೆ ಕಾರಣ ದುರ್ದರ್ಶನ ಅಂದರೆ ಕೆಟ್ಟದ್ದನ್ನು ಕಾಣುವುದು. ಕೆಟ್ಟದ್ದನ್ನು ಕಂಡೊಡನೆ ಮನುಜ ತಲ್ಲಣಗೊಳ್ಳುತ್ತಾನೆ. ಇಂತಹ ದುರ್ದರ್ಶನಗಳನ್ನು ನಿವಾರಿಸಿ ಸುದರ್ಶನವನ್ನು ನೀಡುವ ದೇವ ಸುದರ್ಶನ. ಆತ ಒಳ್ಳೆಯದನ್ನು ಕಾಣಗೊಳಿಸುತ್ತಾನೆ. ಉತ್ಕೃಷ್ಟವಾದ ಆತ್ಮದರ್ಶನವೂ ಸುದರ್ಶನನ ಅನುಗ್ರಹದಿಂದ ಶಕ್ಯ.

* * *

# ಭೂವರಾಹ ಹೋಮ

ಭೂಮಿ ಅಥವಾ ನಿವೇಶಗಳಿಗೆ ಸಂಬಂಧಪಟ್ಟ ದೋಷ-ಕ್ಲೇಶಗಳ ಪರಿಹಾರಕ್ಕಾಗಿ ಭೂವರಾಹ ಹೋಮದ ಅನುಷ್ಠಾನ.

ಧರೆಯನ್ನುದ್ಧರಿಸಿದ ರೂಪ ಭಗವಂತನ ವರಾಹರೂಪ.

ದುಷ್ಟ ಹಿರಣ್ಯಾಕ್ಷ ಭೂಮಿಯನ್ನು ಮುಳುಗಿಸಿದ. ಮನೆ ಮುಳುಗಿಸುವವರು ಕೆಲವರಿರುತ್ತಾರೆ! ಬ್ಯಾಂಕ್ ಮುಳುಗಿಸುವವರು!! ದೇಶ ಮುಳುಗಿಸುವವರು!!! ಹೀಗೆ ಮುಳುಗಿಸುವವರ ಸಂಖ್ಯೆಗೆ ಕೊನೆಯಿಲ್ಲ. ದೊಡ್ಡದನ್ನು ಮುಳುಗಿಸುವವ ದೊಡ್ಡ ದುಷ್ಟ. ಇಡೀ ಭೂಮಂಡಲವನ್ನೇ ಮುಳುಗಿಸಹೊರಟ ದುಷ್ಟಶಕ್ತಿ ಹಿರಣ್ಯಾಕ್ಷ.

"ಹಿರಣ್ಯಾಕ್ಷನೆಂಬ ದೈತ್ಯಶಕ್ತಿ ಭೂಮಿಯನ್ನು ಕಕ್ಷೆಯಿಂದ ತಪ್ಪಿಸಿತು. ಭೂಮಿ ಅಂಡೋದಕದಲ್ಲಿ ಮುಳುಗತೊಡಗಿತು. ಭಕ್ತರ ಮೊರೆ ಮುಗಿಲು ಮುಟ್ಟಿತು. ಭಗವಂತ ವರಾಹನಾಗಿ ಉದಿಸಿದ. ಹಿರಣ್ಯಾಕ್ಷನನ್ನು ಕೊಂದು ಭೂಮಿಯನ್ನು ಕಕ್ಷೆಯಲ್ಲಿಟ್ಟು ಪೊರೆದ."

ಇದೇ ಶ್ವೇತವರಾಹ, ಈ ಕಲ್ಪಕ್ಕೆ ಹೆಸರು ಕೊಟ್ಟ ರೂಪ.

ಇದಕ್ಕಿಂತ ಮೊದಲೊಮ್ಮೆ ವರಾಹಾವತಾರವಾಗಿದೆ. ಆಗ ಭೂಮಿ ತಾನೇ ತಾನಾಗಿ ಕಕ್ಷೆಯಿಂದ ಕಳಚಿ ಬೀಳತೊಡಗಿತ್ತು. ಕೃಪಾಲುವಾದ ಭಗವಂತ ಚತುರ್ಮುಖನಿಂದ ಕೃಷ್ಣವರಾಹನಾಗಿ ಆವಿರ್ಭವಿಸಿದ. ಈತನ ರೋಮವೇ ದರ್ಭೆ, ಬೆವರೇ ತಿಲ. ಕೈಯಲ್ಲಿ ಸ್ರುಕ್-ಸ್ರುವ ಮುಂತಾದ ಯಜ್ಞಸಾಧನಗಳು.

ಆದ್ದರಿಂದಲೇ ಇದು ಯಜ್ಞವರಾಹ. ಯಜ್ಞವನ್ನು ಸೃಜಿಸಿ ಭೂಮಿಯನ್ನು ಉದ್ಧರಿಸಿದ ರೂಪವಿದು. ಭೂಮಿಯ ಧಾರಕಶಕ್ತಿ ಯಜ್ಞ-ಯಾಗ.

ಮತ್ಸ್ಯಕ್ಕಿಂತಲೂ ಮೊದಲ ಅವತಾರ ಈ ಯಜ್ಞವರಾಹ. ಹಾಗಾಗಿಯೇ ತಂತ್ರಸಾರ ಸಂಗ್ರಹದ 72 ಮಂತ್ರಗಳಲ್ಲಿ ಮೊದಲ ಮಂತ್ರ ಭೂವರಾಹ ಮಂತ್ರ.

ವರಾಹ ಸಂಬಂಧಿ ಮೂರು ಮಂತ್ರಗಳನ್ನು ಆಚಾರ್ಯ ಮಧ್ವರು ತಂತ್ರಸಾರದಿಂದ ಸಂಗ್ರಹಿಸಿದ್ದಾರೆ. 33 ಅಕ್ಷರದ ದೊಡ್ಡಮಂತ್ರ ಮೊದಲನೆಯದು. ಇದು ತ್ರಯಸ್ತ್ರಿಂಶದಕ್ಷರ ಭೂವರಾಹಮಂತ್ರ. ಚತುರ್ದಶಾಕ್ಷರ ಭೂವರಾಹ ಮಂತ್ರ ಎರಡನೆಯದು. ಕೊನೆಯದು ಸಪ್ತಾಕ್ಷರ ವರಾಹ ಮಂತ್ರ.

## ಧ್ಯೇಯ ರೂಪ

ಶ್ಯಾಮವರ್ಣದ ಹಂದಿಯ ಮೋರೆಯ ಸುಂದರ ರೂಪ ದೇವ ವರಾಹನದು. ಚತುರ್ಬಾಹುಗಳಲ್ಲಿ ಸುದರ್ಶನ, ಪಾಂಚಜನ್ಯ, ಅಭಯ ಮುದ್ರೆ, ವರಮುದ್ರೆಗಳು, ಎಡತೊಡೆಯಲ್ಲಿ ಕುಳಿತ ಭೂಮಿದೇವಿ. ವಾಸುದೇವಾದಿ ತನ್ನೆಲ್ಲಾ ರೂಪಗಳ ಮಧ್ಯದಲ್ಲಿ ಶೋಭಿಸುತ್ತಾ 'ಸ್ವಮೂರ್ತಿ-ಗಣಮಧ್ಯಗ'ನಾಗಿದ್ದಾನೆ. ಬ್ರಹ್ಮ, ವಾಯು, ಶಿವ, ಶೇಷ, ಗರುಡ, ಇಂದ್ರಾದಿ ದಿಕ್ಪಾಲಕರು ಇವರೆಲ್ಲರೂ ಸುತ್ತುವರಿದು ಭೂವರಾಹನನ್ನು ಸೇವಿಸುತ್ತಿದ್ದಾರೆ. ಈ ರೀತಿ ವರಾಹ ಧ್ಯಾನದಿಂದ ಸಕಲವಾಂಛಿತ ಸಿದ್ಧಿ.

**ಶ್ಯಾಮಃ ಸುದರ್ಶನದರಾಭಯ ಸದ್ವರೇತೋ**
**ಭೂಮ್ಯಾ ಯುತೋಽಖಿಲ ನಿಜೋಕ್ತ ಪರಿಗ್ರಹೈಶ್ಚ ।**
**ಧ್ಯೇಯೋ ನಿಜೈಶ್ಚ ತನುಭಿಃ ಸಕಲೈರುಪೇತಃ**
**ಕೋಲೋ ಹರಿಃ ಸಕಲವಾಂಛಿತಸಿದ್ಧಯೇಽಜಃ ॥**

**(ತಂತ್ರಸಾರ ಸಂಗ್ರಹ : 4–5)**

ಇಂತಹ ವರಾಹನ ಧ್ಯಾನದೊಡನೆ ಆಹುತಿನೀಡುವ ಪ್ರಕ್ರಿಯೆ ಭೂವರಾಹ ಹೋಮವೆನಿಸಿದೆ.

ಜೇನಿನಿಂದ ಸಿಕ್ತವಾದ ಅರಳು, ಎಳ್ಳು, ಪಲಾಶಸಮಿತ್ತು ಹಾಗೂ ಆಜ್ಯಗಳಿಂದ ಕನಿಷ್ಠ 108 ಬಾರಿ, ಭೂವರಾಹನಿಗೆ ಆಹುತಿ ನೀಡಬೇಕು. ಇಲ್ಲಿ ತ್ರಯಸ್ತ್ರಿಂಶದಕ್ಷರದ ಮಹಾಭೂವರಾಹ ಮಂತ್ರವು ಪ್ರಧಾನಾಹುತಿಗೆ ಮಂತ್ರ, ಈ ಪ್ರಧಾನಾಹುತಿಗೆ ಪೂರ್ವಾಪರಗಳಲ್ಲಿ ಸಪ್ತಾಕ್ಷರ ವರಾಹಮಂತ್ರದಿಂದ ಆಜ್ಯಾಹುತಿ ನೀಡಬೇಕು. ಯಜ್ಞದ ಉದ್ದೇಶಕ್ಕೆ ಅನುಗುಣವಾಗಿ ಚರು, ಪಾಯಸ, ಅಪಾಮಾರ್ಗಸಮಿತ್ ಮುಂತಾದ ದ್ರವ್ಯಗಳಿಂದಲೂ ಆಹುತಿ ನೀಡುವುದಿದೆ.

**ಉದ್ದೇಶ :** 'ಭೂಪತಿತ್ವಂ ಮೇ ದೇಹಿ ದದಾಪಯ' ಎಂಬ ಮಾತು ಈ ಮಂತ್ರದಲ್ಲಿದೆ. 'ಭೂಮಿಯ ಒಡೆತನವನ್ನು ಎನಗೆ ಕೊಡು, ಕೊಡಿಸು' ಎಂಬ ಪ್ರಾರ್ಥನೆಯಿದು. ಪೂರ್ಣಮಂತ್ರವನ್ನು ಹತ್ತುಸಾವಿರಕ್ಕೆ ಕಡಿಮೆಯಿಲ್ಲದೇ ಜಪಿಸಿ ದಶಾಂಶ ಸಂಖ್ಯೆಯಲ್ಲಿ ಹೋಮಿಸುವುದರಿಂದ ಅಭೀಪ್ಸಿತ ಭೂಮಿಯ ಆಧಿಪತ್ಯ ಲಭ್ಯವಾಗುತ್ತದೆ.

ಕೊಪ್ರೇಶಾಚಾರ್ಯರು ಕೆಲಕಾಲ ಕೂಡಿಹಾಕಿದ್ದ ಧನದಿಂದ ಒಂದು ಭೂಭಾಗವನ್ನು ಖರೀದಿಸಿದರು. ಎರಡು ವತ್ಸರ ಕಳೆದವು. ಮನೆಕಟ್ಟುವ ಯೋಚನೆ ಮೂಡಿತು. ಆದರೆ ನಿವೇಶನದಲ್ಲೊಂದು ಫಲಕ ನೆಡಲ್ಪಟ್ಟಿತ್ತು. "ಇದು ಬಾಬುರವರಿಗೆ ಸೇರಿದ ನಿವೇಶನ. ಅತಿಕ್ರಮಪ್ರವೇಶ ಶಿಕ್ಷಾರ್ಹ" ಎಂದು. ಸ್ವಂತ ನಿವೇಶನದಲ್ಲಿ ಅತಿಕ್ರಮವಾಗಿತ್ತು. ಮಾರಾಟ ಮಾಡಿದ್ದವನ ಮಕ್ಕಳು ತಗಾದೆ ತೆಗೆದಿದ್ದರು. ಮಾತುಕತೆ ಫಲದಾಯಕವಾಗಲಿಲ್ಲ. ಸಂಭಾವಿತ ವ್ಯಕ್ತಿ ಕೊಪ್ರೇಶಾಚಾರ್ಯರು ಕೆಟ್ಟ ಮಾತುಗಳ ಭರ್ತ್ಸನದಿಂದ ಅವಮಾನಗೊಂಡು ಖಿನ್ನರಾದರು. ಕೋರ್ಟು ಕಛೇರಿ ತಲೆನೋವಾಗ ತೊಡಗಿತು. ಶ್ರದ್ಧಾಳು ಕೊಪ್ರೇಶಾಚಾರ್ಯರು ವರಾಹನ ಮೊರೆಹೋದರು. ಭುವರಾಹ ಮಂತ್ರವನ್ನು ಶ್ರದ್ಧೆಯಿಂದ ಜಪಿಸತೊಡಗಿದರು. ದಶಾಂಶ

ಸಂಖ್ಯೆಯ ಹೋಮವೂ ನೆರವೇರಿದೆ. ಇದ್ದಕ್ಕಿದ್ದಂತೆ ಭೂಮಾಲಿಕ ಬಾಬುವಿನ ಮನಃಪರಿವರ್ತನೆಯಾಗಿದೆ. ರಗಳೆಗಳು ನಿಂತವು. ಆರೇ ತಿಂಗಳಲ್ಲಿ ನೂತನ ಗೃಹವನ್ನು ಕೊಪ್ರೇಶಾಚಾರ್ಯರು ಪ್ರವೇಶಿಸಿದ್ದಾರೆ.

ಯಾವ ಜಾಗದ ಬಗ್ಗೆ ಸಮಸ್ಯೆಯಿದೆಯೋ ಆ ಜಾಗದ ಎಂಟೂ ದಿಕ್ಕಿನಿಂದ ಹಿಡಿಮಣ್ಣನ್ನು ತರಬೇಕು. ಆ ಮಣ್ಣನ್ನು ಮೂರು ಭಾಗವಾಗಿಸಿ ಒಂದು ಭಾಗವನ್ನು ಹೋಮಕುಂಡ ಅಥವಾ ಸ್ಥಂಡಿಲ ನಿರ್ಮಾಣದಲ್ಲಿ ವಿನಿಯೋಗಿಸಬೇಕು. ಇನ್ನೊಂದನ್ನು ಹೋಮದ್ರವ್ಯದಲ್ಲಿ ಸೇರಿಸಬೇಕು. ಮತ್ತೊಂದು ಭಾಗವನ್ನು ಚರುಬೇಯಿಸುವ ಪಾತ್ರೆಗೆ ಲೇಪಿಸುವುದು. ಸಿಂಹರಾಶಿಯಲ್ಲಿ ಸೂರ್ಯನಿದ್ದಾಗ ಹೋಮ, ಹೋಮಾನಂತರದಲ್ಲಿ ಹುತಭಸ್ಮವನ್ನು ಸಮಸ್ಯೆಯ ಸುಳಿಯಲ್ಲಿರುವ ಭೂಮಿಯ ದಿಕ್ಕುಗಳಲ್ಲಿ ಸಿಂಪಡಿಸುವುದರಿಂದ ನಿಶ್ಚಿತಫಲಪ್ರಾಪ್ತಿಯೆಂಬ ನಂಬಿಕೆ ಚಾಲ್ತಿಯಲ್ಲಿದೆ.

ದೇವಸ್ಥಾನ, ಸ್ವಗೃಹಾದಿಗಳ ನಿರ್ಮಾಣಾನಂತರದಲ್ಲಿ ಹರಿಪ್ರೀತಿಗಾಗಿ ಭೂವರಾಹ ಹೋಮವನ್ನು ನಡೆಸುವುದಿದೆ. ಇಲ್ಲಿ ಸಮಿತ್, ಪಾಯಸ, ಆಜ್ಯ, ತಿಲಗಳಿಂದ ಹೋಮಿಸಲಾಗುತ್ತದೆ.

* * *

# ನವಗ್ರಹ (ಗ್ರಹಶಾಂತಿ) ಹೋಮ

ಗ್ರಹಗಳು ನಮ್ಮ ಪೂರ್ವಜನ್ಮಾರ್ಜಿತ ಕರ್ಮದ ಫಲವನ್ನು ಮುಂಚಿತವಾಗಿ ಸೂಚಿಸುತ್ತವೆ. ಯಾವ ಗ್ರಹವೂ ದುಷ್ಟಗ್ರಹವಲ್ಲ. ರವಿಯೇ ಆಗಲಿ, ಶನಿಯೇ ಆಗಲಿ ಕಾಟವನ್ನು ಕೊಡುವುದಿಲ್ಲ. ಕೆಟ್ಟದ್ದನ್ನು ಮಾಡುವುದಿಲ್ಲ. ಸೂಚಿಸುವುದು ಮಾತ್ರ. ಮುಂದೆ ಬರುವ ಆಪತ್ತನ್ನು ಪೂರ್ವಭಾವಿಯಾಗಿ ಸೂಚಿಸುವುದರ ಮೂಲಕ ಉಪಕರಿಸುವು ದರಿಂದಲೇ ಈ ಗ್ರಹಗಳು ಪೂಜ್ಯರು.

ರಾಶಿಚಕ್ರದಲ್ಲಿ ಸಂಚರಿಸುತ್ತಿರುವ ಗ್ರಹಗಳ ಶಕ್ತಿ ವಾತಾವರಣದಲ್ಲೆಲ್ಲಾ ಪಸರಿಸಿದೆ. ಗರ್ಭಚೀಲದಿಂದ ಹೊರಬಂದ ಮಗು ಮೊದಲ ಶ್ವಾಸವನ್ನು ಸ್ವೀಕರಿಸುವಾಗ ವಾತಾವರಣದ ಗ್ರಹಶಕ್ತಿಯನ್ನು ಆವಾಹಿಸಿಕೊಳ್ಳುತ್ತದೆ. ಆ ಕಾಲದ ಗ್ರಹಸ್ಥಿತಿ ಅದರ ಜೀವನದ ಏಳು ಬೀಳುಗಳನ್ನು ನಿರ್ಧರಿಸು ತ್ತದೆ. ಅದೇ ಆ ಮಗುವಿನ ಜಾತಕವೆನಿಸುತ್ತದೆ. ಇಲ್ಲಿಯ ಗ್ರಹಗಳು ಸಮಗ್ರಜೀವಿತದ ಶುಭ-ಅಶುಭಗಳನ್ನು ಸೂಚಿಸುತ್ತವೆ.

ಗ್ರಹಗಳಿಂದ ಸೂಚಿತವಾದ ದೋಷದ ನಿವೃತ್ತಿಗಾಗಿ ಗ್ರಹಾರಾಧನೆ ಯನ್ನು ಶಾಸ್ತ್ರವು ವಿಧಿಸಿದೆ. 'ದುಷ್ಟಾರಿಷ್ಟೇ ಸಮಾಯಾತೇ ಕರ್ತವ್ಯಂ ಗ್ರಹ ಶಾಂತಿಕಮ್' ಎಂಬುದಾಗಿ. ಮಳೆ, ಪುಷ್ಟಿ, ಆಯುಷ್ಯ, ಆರೋಗ್ಯ ಮುಂತಾದ ಉದ್ದೇಶದಿಂದಲೂ ಗ್ರಹಗಳನ್ನು ಆರಾಧಿಸುವುದಿದೆ. ಗ್ರಹ ಶಾಂತಿಯಲ್ಲಿ ಸಾಮಾನ್ಯವಾಗಿ ಐದು ಬಗೆಯಿದೆ. ಪೂಜೆ, ಹೋಮ, ಜಪ, ಸ್ತೋತ್ರ, ದಾನ ಎಂಬುದಾಗಿ.

**ಗ್ರಹಪೂಜೆ** : ನವಗ್ರಹ ಪೂಜೆಯಲ್ಲಿ ಗ್ರಹಮಂಡಲ, ಗ್ರಹಧಾನ್ಯ, ಗ್ರಹಪ್ರತಿಮೆಗಳು ಪ್ರತೀಕವೆನಿಸುತ್ತವೆ.

ನವಗ್ರಹಮಂಡಲವನ್ನು ಹಲವು ಬಗೆಯಲ್ಲಿ ಬರೆಯಬಹುದಾಗಿದೆ. ಸಮಾನವಾದ ಅಂಶವೆಂದರೆ ಮಂಡಲದಲ್ಲಿ ಐದು ಬಣ್ಣಗಳನ್ನು ಬಳಸಬೇಕು. ಈ ಐದು ಬಣ್ಣಗಳು ಪಂಚಭೂತಗಳ ಪ್ರತೀಕಗಳು. ಅವೆಂದರೆ ಬಿಳಿ(ಜಲ), ಹಳದಿ(ಆಕಾಶ), ಕೆಂಪು(ಅಗ್ನಿ), ಹಸಿರು(ಪೃಥ್ವೀ) ಹಾಗೂ ಕಪ್ಪು(ವಾಯು). ಈ ಪಂಚವರ್ಣಗಳನ್ನು ತುಂಬುವಾಗಲೂ ಅನುಸರಿಸಬೇಕಾದ ಕ್ರಮವಿದೆ. ಅದನ್ನು ಪೌರೋಹಿತ್ಯಗ್ರಂಥಗಳಿಂದ ತಿಳಿಯಬಹುದು.

ಮಧ್ಯದಲ್ಲಿ ರಕ್ತವರ್ಣದ ವೃತ್ತದಲ್ಲಿ ಸೂರ್ಯನು ಪೂಜ್ಯನು. ಪೂರ್ವದಲ್ಲಿ ಬಿಳಿಬಣ್ಣದ ಪಂಚಕೋನದಲ್ಲಿ ಶುಕ್ರ, ಆಗ್ನೇಯದ ಶುಕ್ಲ ಚತುಷ್ಕೋನದಲ್ಲಿ ಚಂದ್ರ, ದಕ್ಷಿಣದ ರಕ್ತತ್ರಿಕೋನದಲ್ಲಿ ಕುಜ, ನೈಋತ್ಯದ ಕೃಷ್ಣವರ್ಣದ ಮೊರದಂತಹ ಆಕೃತಿಯಲ್ಲಿ ರಾಹು. ಪಶ್ಚಿಮದ ನೀಲವರ್ಣದ ಧನುಸ್ಸಿನಾಕೃತಿಯಲ್ಲಿ ಶನಿ. ವಾಯವ್ಯದ ಚಿತ್ರವರ್ಣದ ಧ್ವಜಾಕಾರದ ಮೇಲೆ ಕೇತು. ಉತ್ತರದ ಹಳದಿ ವರ್ಣದ ಆಯತಾಕೃತಿ –ಯಲ್ಲಿ ಗುರು ಹಾಗೂ ಈಶಾನ್ಯದ ಹಸಿರುಬಣ್ಣದ ಬಾಣಾಕೃತಿಯಲ್ಲಿ ಬುಧ. ಹೀಗೆ ಮಂಡಲದಲ್ಲಿ ಗ್ರಹಗಳನ್ನು ಸ್ಥಾಪಿಸಿ ಪೂಜಿಸುವುದು.

ಆಯಾಯ ಗ್ರಹಗಳಿಗೆ ಸಂಬಂಧಿಸಿದ ಗೋಧಿ ಮೊದಲಾದ ಧಾನ್ಯಗಳನ್ನಿಟ್ಟು ಗುಡಾನ್ನ ಮೊದಲಾದ ಗ್ರಹಪ್ರೀತಿಕರವಾದ ನೈವೇದ್ಯವನ್ನು ನಿವೇದಿಸಿ ಇಷ್ಟಸಂಖ್ಯೆಯಲ್ಲಿ ಗ್ರಹಮಂತ್ರವನ್ನು ಜಪಿಸಿ, ಗ್ರಹಪ್ರಿಯ ಪುಷ್ಪಗಳಿಂದ ಅರ್ಚಿಸುವುದನ್ನು ಗ್ರಹಪೂಜೆ ಎನ್ನಲಾಗುತ್ತದೆ. ಗ್ರಹಜಪ ಸಂಖ್ಯೆಗೆ ಹತ್ತಕ್ಕೆ ಒಂದರಂತೆ ಅಧಿದೇವತಾ–ಪ್ರತ್ಯಧಿದೇವತೆಗಳ ಮಂತ್ರವನ್ನು ಜಪಿಸತಕ್ಕದ್ದು. ದಶಾಂಶ ಸಂಖ್ಯೆಯಲ್ಲಿ ತರ್ಪಣ ಅಪೇಕ್ಷಿತ. ಈ ಕೆಳಗಿನ ಕೋಷ್ಠಕದಲ್ಲಿ ಪೂಜಾ ವಿಷಯದ ಮಾಹಿತಿಯಿದೆ.

| | ಗ್ರಹಗಳು | ಸೂರ್ಯ | ಚಂದ್ರ | ಕುಜ | ಬುಧ | ಗುರು | ಶುಕ್ರ | ಶನಿ | ರಾಹು | ಕೇತು |
|---|---|---|---|---|---|---|---|---|---|---|
| 1. | ಧಾನ್ಯ | ಗೋಧಿ | ಅಕ್ಕಿ | ತೊಗರಿ | ಹೆಸರು | ಕಡಲೆ | ಅವರೆ | ಎಳ್ಳು | ಉದ್ದು | ಹುರುಳಿ |
| 2. | ಸಮಿಧೆ | ಎಕ್ಕೆ | ಪಲಾಶ | ಖದಿರ | ಉತ್ತರಾಣೆ | ಅಶ್ವತ್ಥ | ಅತ್ತಿ | ಶಮೀ | ಗರಿಕೆ | ಕುಶ |
| 3. | ನೈವೇದ್ಯ | ಗುಡಾನ್ನ | ಪಾಯಸ | ಗಂಜಿ | ಕ್ಷೀರಾನ | ದಧ್ಯನ್ನ | ಘೃತಾನ್ನ | ಎಳ್ಳುಮಿ –ಶ್ರಿತಾನ್ನ | ಮೊಸ– ರನ್ನ | ಚಿತ್ರಾನ್ನ |
| 4. | ಪುಷ್ಪ | ಗನ್ನೆದಶೆ | ನೈದಿಲೆ | ದಾಸ– ವಾಳ | ಸಂಪಿಗೆ | ತಾವರೆ | ಜಾಜಿ | ಮಲ್ಲಿಗೆ | ಮೊಲ್ಲೆ | ಮಲ್ಲಿಗೆ |
| 5. | ಮಂಡಲ ಸ್ಥಾನ | ಮಧ್ಯ | ಆಗ್ನೇಯ | ದಕ್ಷಿಣ | ಈಶಾನ್ಯ | ಉತ್ತರ | ಪೂರ್ವ | ಪಶ್ಚಿಮ | ನೈಋತ್ಯ | ವಾಯವ್ಯ |
| 6. | ಚಿಹ್ನೆ | ವರ್ತುಲ | ಚತುರಸ್ರ | ತ್ರಿಕೋಣ | ಬಾಣ | ಆಯತ | ಪಂಚ ಕೋನ | ಬಿಲ್ಲು | ಮೊರ | ಧ್ವಜ |
| 7. | ಮಂಡಲ ಬಣ್ಣ | ಕೆಂಪು | ಬಿಳಿ | ಕೆಂಪು | ಹಳದಿ | ಹಳದಿ | ಬಿಳಿ | ಕಪ್ಪು | ಕಪ್ಪು | ಚಿತ್ರ |
| 9. | ಜಪ ಸಂಖ್ಯೆ | 7 ಸಹಸ್ರ | 11 ಸಹಸ್ರ | 10 ಸಹಸ್ರ | 4 ಸಹಸ್ರ | 19 ಸಹಸ್ರ | 19 ಸಹಸ್ರ | 23 ಸಹಸ್ರ | 18 ಸಹಸ್ರ | 17 ಸಹಸ್ರ |
| 10. | ಪ್ರತಿಮೆಗೆ | ತಾಮ್ರ | ಬೆಳ್ಳಿ | ತಾಮ್ರ | ಚಿನ್ನ | ಚಿನ್ನ | ಬೆಳ್ಳಿ | ಕಬ್ಬಿಣ | ಸೀಸ | ಕಂಚು– ಲೋಹ |
| 11. | ರತ್ನ | ಮಾಣಿಕ್ಯ | ಮುತ್ತು | ಹವಳ | ಪಚ್ಚೆ | ಪುಷ್ಯ –ರಾಗ | ವಜ್ರ | ನೀಲ | ಗೋಮೇ –ಧಿಕ | ವೈಢೂ –ರ್ಯ |
| 12. | ಅಧಿ ದೇವತೆ | ಅಗ್ನಿ | ಆಪಃ | ಪೃಥ್ವೀ | ವಿಷ್ಣು | ಇಂದ್ರ | ಇಂದ್ರಾಣಿ | ಪ್ರಜಾ ಪತಿ | ಸರ್ಪ | ಬ್ರಹ್ಮಾ |
| 13. | ಪ್ರತ್ಯಧಿ ದೇವತೆ | ರುದ್ರ | ಗೌರೀ | ಸ್ಕಂದ | ಪುರುಷ | ಬ್ರಹ್ಮಾ | ಇಂದ್ರ | ಯಮ | ಕಾಲ | ಚಿತ್ರಗುಪ್ತ |
| 14. | ಅಂತರ್ಯಾ –ಮಿ | ರಾಮ ಭಗವದ್ರೂಪ | ಕೃಷ್ಣ | ನರ – ಸಿಂಹ | ಬುದ್ಧ | ವಾಮನ | ಪರಶು | ಕೂರ್ಮ – ರಾಮ | ವರಾಹ | ಮತ್ಸ್ಯ |

ಸೂರ್ಯಾದಿ ಗ್ರಹಗಳಿಗೆ ಹೋಮಿಸಿದ ನಂತರ ದುರ್ಗಾ, ಗಣಪತಿ ಮೊದಲಾದ ಎಂಟು ಪರಿವಾರ ದೇವತೆಗಳಿಗೂ, ಇಂದ್ರಾದ್ಯಷ್ಟ ದಿಕ್ಪಾಲಕರಿಗೂ ನವಗ್ರಹ ಹೋಮದ ದಶಾಂಶ ಸಂಖ್ಯೆಯಲ್ಲಿ ಆಹುತಿ ನೀಡಬೇಕು. ಪ್ರತಿಯೊಂದು ಗ್ರಹಗಳಿಗೂ 108ರಂತೆ ಆಹುತಿಯನ್ನಿತ್ತು ಹೋಮಿಸಿದರೆ ಅದು ಪೂರ್ಣನವಗ್ರಹ ಹೋಮ. 28ರಂತೆ ಆಹುತಿಯಿತ್ತಾಗ ಪಾದಗ್ರಹಯಜ್ಞ,

ಕೇವಲ ಎಂಟೆಂಟು ಆಹುತಿ ನೀಡುವುದು ಪ್ರಶಸ್ತವಲ್ಲ. ಈ ಅಷ್ಟಾಹುತಿ ಎಂಬ ಪ್ರಕ್ರಿಯೆಗೆ ಸರಿಯಾಗಿ ಪ್ರಮಾಣದ ಆಧಾರವೂ ಲಭ್ಯವಿಲ್ಲ.

**ಜಪ :** ನವಗ್ರಹಗಳಿಗೆ ಸಂಬಂಧಿಸಿದ ಒಂಭತ್ತು ವೈದಿಕ ಮಂತ್ರಗಳಿವೆ. ಇದರ ಉಪದೇಶವಿದ್ದವರು ಜಪ ಮಾಡಬೇಕು. ಸಾಮಾನ್ಯ ನವಗ್ರಹ ಹೋಮಗಳಲ್ಲಿ ಒಂಭತ್ತೂಗ್ರಹಗಳ ಮಂತ್ರಗಳನ್ನು 108ರಂತೆ ಜಪಿಸಲಾಗುತ್ತದೆ.

ನವಗ್ರಹ ಮಂತ್ರಗಳಲ್ಲಿ 'ಆ ಕೃಷ್ಣೇನ' ಎಂಬ ಸೂರ್ಯಮಂತ್ರ ಹಿರಣ್ಮಯ ರಥದಲ್ಲಿ ಭುವನಪ್ರದಕ್ಷಿಣೆ ಬರುವ ಸವಿತೃದೇವನನ್ನು ಹೇಳುತ್ತಿದೆ. ಆದರೆ ಮುಂದಿನ ಮಂತ್ರಗಳು ಸಂಬಂಧಿಸಿದ ಗ್ರಹಗಳನ್ನು ಹೆಸರಿಸುವುದೇ ಇಲ್ಲ. ಉದಾಹರಣೆಗೆ ಶಮಗ್ನಿರಗ್ನಿಭಿಃ......ಎಂಬ ಶನೈಶ್ಚರ ಮಂತ್ರ 'ಅಗ್ನಿಯು ಜ್ವಾಲೆಗಳಿಂದ ಮಂಗಳವನ್ನುಂಟುಮಾಡಲಿ. ಸೂರ್ಯ ಮಂಗಳಕರನಾಗಿ ತಪಿಸಲಿ. ಗಾಳಿ ಕಲ್ಯಾಣಕಾರಕನಾಗಿ ಬೀಸಲಿ. ನೀರು ಸುಖಕರವಾಗಿ ಹರಿಯಲಿ' ಎನ್ನುತ್ತಿದೆ. ಇದು ಶನಿಯ ಬಗ್ಗೆ ಮಾತೆತ್ತುವು –ದಿಲ್ಲ. 'ಕಯಾ ನಃ' ಎಂಬ ರಾಹುಮಂತ್ರ ರಾಹುವಿನ ಗೋಜಿಗೇ ಹೋಗುವುದಿಲ್ಲ. ಹಾಗಿದ್ದರೂ ಅವು ಆಯಾಯ ಗ್ರಹಗಳಿಗೆ ಪ್ರಿಯವಾದ ಮಂತ್ರಗಳು. ಅಂದರೆ ಆ ಮಂತ್ರದ ಮೂಲಕ ಪರಮಾತ್ಮನನ್ನು ಧ್ಯಾನಿಸಿದಾಗ ಗ್ರಹಪ್ರೀತಿಯುಂಟಾಗುತ್ತದೆ.

ಗ್ರಹಜಪದ ಸಂಖ್ಯೆಯ ಬಗೆಗೆ ಎರಡು ಕ್ರಮವಿದೆ. ಒಂದು ಕ್ರಮದಂತೆ ಜಪಸಂಖ್ಯೆಯನ್ನು ಕೋಷ್ಟಕದ 9ನೇ ಪಂಕ್ತಿಯಲ್ಲಿ ನೋಡಬಹುದು. ಇನ್ನೊಂದು ಕ್ರಮದಂತೆ ಆಯಾಯ ಗ್ರಹಗಳ ದಶಾವರ್ಷದ ಸಂಖ್ಯೆಯಲ್ಲಿ ಜಪಿಸುವುದು. ಆದಿತ್ಯನ ದಶಾವರ್ಷ ಆರು ವರ್ಷ. ಆದ್ದರಿಂದ ಸೂರ್ಯಜಪ 6,000. ಹೀಗೆಯೇ ಚಂದ್ರದಶಾ ವರ್ಷ 10ವರ್ಷ. ಚಂದ್ರಪ್ರೀತಿಗಾಗಿ 10,000 ಜಪ. ಕುಜಪ್ರೀತಿಗಾಗಿ 7,000. ಬುಧನಿಗೆ 17,000. ಗುರುವಿಗೆ 16,000. ಶುಕ್ರನಿಗೆ 20,000. ಶನಿಗೆ 19,000. ರಾಹುವಿಗೆ 18,000. ಕೇತುವಿಗೆ 7,000. ಒಟ್ಟು ಸೇರಿದರೆ 1,20,000 ಜಪವಾಗುತ್ತದೆ. 120 ಎಂಬುದು ಮನುಜನ ಪೂರ್ಣಾಯುಷ್ಯದ ಸಂಖ್ಯೆ. ಸ್ವತಃ ಕರ್ತೃವೇ ಇಷ್ಟು ಜಪಿಸುವುದು ದುಃಸಾಧ್ಯವಾದ್ದರಿಂದ ಶೋತ್ರಿಯ ಬ್ರಾಹ್ಮಣರ ಮೂಲಕ ಜಪ

ಮಾಡಿಸಬಹುದು. ಯಥಾಶಕ್ತಿ ಗಾಯತ್ರಿ ಜಪದಿಂದಲೂ ಗ್ರಹದೋಷವನ್ನು ಪರಿಹರಿಸಿಕೊಳ್ಳಬಹುದು.

**ಸ್ತೋತ್ರ :** ಪುರಾಣಗಳಲ್ಲಿ ದೃಷ್ಟವಾದ ಅಥವಾ ಅಪರೋಕ್ಷ ಜ್ಞಾನಿಗಳಿಂದ ರಚಿತವಾದ ನವಗ್ರಹಸೋತ್ರಗಳಿವೆ. ಇವನ್ನು ಪಠಿಸುವುದೂ ಗ್ರಹಪ್ರೀತಿ ಸಾಧಕವಾಗಿದೆ. **"ನಮಃ ಸೂರ್ಯಾಯ ಸೋಮಾಯ"** ಎಂಬುದು ಪ್ರಸಿದ್ಧ ಸ್ತೋತ್ರ. ಶ್ರೀಮದ್ವಾದಿರಾಜತೀರ್ಥರು ರಚಿಸಿರುವ ಗ್ರಹಸ್ತೋತ್ರ ಚಿಕ್ಕದಾಗಿದ್ದು ನಿತ್ಯಪಠನೆಗೆ ಅನುಕೂಲವಾಗಿದೆ. ಅನುಸಂಧಾನಕ್ಕಾಗಿ ಅರ್ಥದೊಂದಿಗೆ ಇಲ್ಲಿ ಕೊಟ್ಟಿದೆ.

ಭಾಸ್ವಾನ್ಮೇ ಭಾಸಯೇತ್ ತತ್ವಂ ಚಂದ್ರಶ್ಚಾಹ್ಲಾದಕೃದ್ ಭವೇತ್ ।
ಮಂಗಲೋ ಮಂಗಲಂ ದದ್ಯಾತ್ ಬುಧಶ್ಚ ಬುಧತಾಂ ದಿಶೇತ್ ॥

ಗುರುಶ್ಚ ಗುರುತಾಂ ದದ್ಯಾತ್ ಕವಿಶ್ಚ ಕವಿತಾಂ ದಿಶೇತ್ ।
ಶನಿಶ್ಚ ಶಂ ಪ್ರಾಪಯತು ಕೇತುಃ ಕೇತುಂ ಜಯೇಽರ್ಪಯೇತ್ ॥

ರಾಹುರ್ಮೇ ರಹಯೇದ್ರೋಗಂ ಗ್ರಹಾಃ ಸಂತು ಕರಗ್ರಹಾಃ ।
ನವಂ ನವಂ ಮಮೈಶ್ವರ್ಯಂ ದಿಶಂತ್ವೇತೇ ನವಗ್ರಹಾಃ ॥

ಶನೇ ದಿನಮಣೇಃ ಸೂನೋ ಹ್ಯನೇಕಗುಣಸನ್ಮಣೇ ।
ಅರಿಷ್ಟಂ ಹರ ಮೇಽಭೀಷ್ಟಂ ಕುರು ಮಾ ಕುರು ಸಂಕಟಮ್ ॥

ಹರೇರನುಗ್ರಹಾರ್ಥಾಯ ಶತ್ರೂಣಾಂ ನಿಗ್ರಹಾಯ ಚ ।
ವಾದಿರಾಜಯತಿಪ್ರೋಕ್ತಂ ಗ್ರಹಸ್ತೋತ್ರಂ ಸದಾ ಪಠೇತ್ ॥

ಸಮುಚಿತ ಪ್ರಾಸಗಳಿಂದ ಸ್ತೋತ್ರ ಸುಂದರವಾಗಿದೆ. "ಸೂರ್ಯನು ನನ್ನ ಮನದಲ್ಲಿ ಭಗವತ್ತತ್ವವನ್ನು ಬೆಳಗಲಿ. ಚಂದ್ರ ಆಹ್ಲಾದವನ್ನೀಯಲಿ. ಮಂಗಳನು ಮಂಗಳಕಾರಕನಾಗಲಿ. ಬುಧನು ಬುದ್ಧಿಮತ್ತೆಯನ್ನು ದಯಪಾಲಿಸಲಿ. ಗುರುವು ಗುರುತ್ವವನ್ನು(ಗೌರವವನ್ನು) ಕರುಣಿಸಲಿ. ಶುಕ್ರನು

ಕವಿತಾಶಕ್ತಿಯನ್ನು ಕೊಡಲಿ. ಶನಿಯು ಶುಭಪ್ರದನಾಗಲಿ. ಕೇತುವು ನನ್ನ ಜಯದ ಪತಾಕೆಯನ್ನು ಹಾರಿಸಲಿ. ರಾಹುವು ರೋಗವನ್ನು ಕಳೆಯಲಿ. ಸಮಸ್ತಗ್ರಹಗಳೂ ಕೈಹಿಡಿದೆತ್ತಲಿ. ಶನಿಯೇ, ದಿನಮಣಿ ಸೂರ್ಯನ ಮಗನೇ, ಅಗಣಿತಗುಣಿಯೇ, ನನ್ನ ಅರಿಷ್ಟವನ್ನು ತರಿ. ಅಭೀಷ್ಟವನ್ನು ಸುರಿ. ಸಂಕಟ ಕೊಡಬೇಡ. ಶ್ರೀಹರಿಯ ಅನುಗ್ರಹಕ್ಕಾಗಿ ಮತ್ತು ಆಂತರ ಬಾಹ್ಯ ಶತ್ರುಗಳ ನಿಗ್ರಹಕ್ಕಾಗಿ ಈ ಗ್ರಹಸ್ತೋತ್ರವನ್ನು ಪಠಿಸಬೇಕು ಎಂದಿದ್ದಾರೆ ಶ್ರೀವಾದಿರಾಜರು.

ಇಲ್ಲಿ ನವಗ್ರಹಗಳನ್ನು ಸ್ತುತಿಸಿದಂತಾಯಿತು. ನಿರ್ದಿಷ್ಟ ಗ್ರಹವೊಂದರಿಂದ ಸೂಚಿತವಾದ ದೋಷದ ನಿವೃತ್ತಿಗಾಗಿ ಪ್ರತ್ಯೇಕ ಗ್ರಹಗಳನ್ನು ಸ್ತುತಿಸುವ ಸ್ತೋತ್ರಗಳೂ ಇವೆ. 'ಜಪಾಕುಸುಮಸಂಕಾಶಂ' ಮುಂತಾದ ಒಂದೊಂದು ಸ್ತೋತ್ರಗಳನ್ನು ಆವೃತ್ತಿಸಿ ಪಠಿಸುವುದು ಗ್ರಹದೋಷ ನಿವರ್ತಕ.

**ದಾನ :** ಗ್ರಹಚಾರ ದೋಷಪರಿಹಾರದ ಮಾರ್ಗಗಳಲ್ಲಿ ದಾನವೂ ಒಂದು. ಗ್ರಹಯಜ್ಞವನ್ನು ಆಚರಿಸಿದಾಗ ಯಜ್ಞಾಂತ್ಯದಲ್ಲಿ ಗ್ರಹಧಾನ್ಯ ಗ್ರಂಥಿಗಳನ್ನು ದಾನ ನೀಡಲೇಬೇಕು. ಆಯಾಯ ಗ್ರಹಗಳಿಗೆ ಸಂಬಂಧಿಸಿದ ಧಾನ್ಯ, ಪ್ರತಿಮೆ, ರತ್ನ, ವಸ್ತ್ರಗಳನ್ನು ದಾನ ಕೊಡುವುದು ದೋಷನಿವಾರಕ ವೆಂಬ ವಿವರ ಶಾಸ್ತ್ರಗಳಲ್ಲಿದೆ. ಸುಶಕ್ತರು ಈ ನಾಲ್ಕೂ ದಾನಗಳನ್ನೀಯಬಹುದು. ಶಕ್ತಿಗನುಗುಣವಾಗಿ ಎನ್ನುವುದಕ್ಕಿಂತಲೂ ಕೊಡುವಾತನ ನಿರ್ವಂಚನ ಬುದ್ಧಿ ಮತ್ತು ಸ್ವೀಕರ್ತೃವಿನ ಪಾತ್ರತೆಯು ದಾನದ ಸಾಫಲ್ಯದಲ್ಲಿ ಮುಖ್ಯಪಾತ್ರವನ್ನು ವಹಿಸುತ್ತದೆ.

ಅಶ್ವತ್ಥ, ಶಮೀ ಮೊದಲಾದ ವೃಕ್ಷಗಳಿಗೆ ಪ್ರದಕ್ಷಿಣೆ ನಮಸ್ಕಾರಗಳೂ ಗ್ರಹದೋಷ ನಿವರ್ತಕ. ಗುರುಗ್ರಹ ಸೂಚಿಸುವ ದೋಷಪರಿಹಾರಕ್ಕೆ ಅಶ್ವತ್ಥಪ್ರದಕ್ಷಿಣೆ, ಶನಿದೋಷಕ್ಕೆ ಶಮೀಪ್ರದಕ್ಷಿಣೆಯನ್ನೂ ಭವಿಷ್ಯಪುರಾಣ ತಿಳಿಸಿದೆ.

ಗ್ರಹಶಾಂತಿ ಎಂಬ ಪ್ರಕ್ರಿಯೆ ಬಹಳ ವಿಸ್ತೃತ. ಗ್ರಹಗಳಲ್ಲಿ ಚಿಂತಿಸಬೇಕಾದ ರಾಮ ಮೊದಲಾದ ಪ್ರತ್ಯೇಕ ಭಗವದ್ರೂಪಗಳನ್ನು ಸ್ಮೃತಿಗಳು ನಿರೂಪಿಸಿವೆ.

ಪರಾಶರಹೋರಾ ಗ್ರಂಥವು ಗ್ರಹಾಧಿಪ ಭಗವಂತನ ಅವತಾರರೂಪಗಳನ್ನು ಹೇಳಿದೆ.

**ರಾಮಾವತಾರಃ ಸೂರ್ಯಸ್ಯ ಬುಧಸ್ಯ ಯದುನಾಯಕಃ ।**
**ನೃಸಿಂಹೋ ಭೂಮಿಪುತ್ರಸ್ಯ ಬುದ್ಧೋ ಸೋಮಸುತಸ್ಯ ತು ॥**
**ವಾಮನೋ ವಿಬುಧೇಜ್ಯಸ್ಯ ಭಾರ್ಗವೋ ಭಾರ್ಗವಸ್ಯ ಚ ।**
**ಕೂರ್ಮೋ ಭಾಸ್ಕರಪುತ್ರಸ್ಯ ಸೈಂಹಿಕೇಯಸ್ಯ ಸೂಕರಃ ॥**
**ಕೇತೋಃ ಮೀನಾವತಾರಶ್ಚ ಯೇ ಚಾನ್ಯೇ ತೇಽಪಿ ಖೇಚರಾಃ ॥**

ಸೂರ್ಯವಂಶದಲ್ಲಿ ಆವಿರ್ಭವಿಸಿದ ಶ್ರೀರಾಮ ಸೂರ್ಯಗ್ರಹ ನಿಯಾಮಕ. ಚಂದ್ರವಂಶದ ಕೃಷ್ಣ ಚಂದ್ರನಿಗೆ ನಿಯಾಮಕ. ಪೃಥಿವೀ ಗರ್ಭಸಂಜಾತ ಕುಜನಲ್ಲಿ ಪಾರ್ಥಿವಕಂಭವನ್ನೊಡೆದು ಹೊರಬಂದ ನರಸಿಂಹ ಉಪಾಸ್ಯನಾಗಿದ್ದಾನೆ. ಸೌಮ್ಯನಾದ ಬುಧನಲ್ಲಿ ಸೌಮ್ಯರೂಪದ ಬುದ್ಧನನ್ನು ಚಿಂತಿಸಬೇಕು. ಶುಕ್ರನನ್ನೂ ಶುಕ್ರಶಿಷ್ಯರನ್ನೂ ನಿಗ್ರಹಿಸಿದ ವಾಮನ ದೇವಗುರುವಿನಿಂದ ಉಪಾಸ್ಯನಾಗಿದ್ದು ಗುರುಗ್ರಹ ನಿಯಾಮಕ. ಭೃಗುಕುಲೋದ್ಭವನಾದ ಶುಕ್ರನಲ್ಲಿ ಭೃಗುಕುಲತಿಲಕನಾದ ಪರಶುರಾಮ. ಮಂದಗತಿಯ ಶನೈಶ್ಚರನಲ್ಲಿ ಮಂದಗತಿಗೇ ಪ್ರಸಿದ್ಧವಾದ ಕೂರ್ಮರೂಪ. ಛಾಯಾಗ್ರಹಗಳೆನಿಸಿದ ರಾಹು-ಕೇತುಗಳಲ್ಲಿ ವರಾಹ-ಮತ್ಸ್ಯರೂಪಗಳು ಪೂಜ್ಯಗಳಾಗಿವೆ.

ಎಲ್ಲಾ ಗ್ರಹಗಳಲ್ಲೂ ಪ್ರಾಣಸ್ಥ ಲಕ್ಷ್ಮೀನರಸಿಂಹನನ್ನು ಚಿಂತಿಸಿದರೆ ಸಾಕು. 'ಸಕಲ ಗ್ರಹಬಲ ನೀನೆ ಸರಸಿಜಾಕ್ಷ' ಎಂಬ ದಾಸವಾಣಿಯಂತೆ ಭಗವಂತ ಪ್ರೀತನಾದರೆ ಸರ್ವಾನುಕೂಲ್ಯ. 'ಏಕಾದಶಸ್ಥೇ ಗೋವಿಂದೇ ಕಿಂ ಕುರ್ವಂತಿ ನವಗ್ರಹಾಃ' ಎಂಬ ಮಾತೂ ಇದನ್ನೇ ಸಾರಿದೆ. ಹಾಗಾಗಿ ಗ್ರಹಾರಾಧನೆಯಲ್ಲಿ ಅಂತರ್ಯಾಮೀ ಶಕ್ತಿಯಾಗಿ ಲಕ್ಷ್ಮೀನೃಸಿಂಹನನ್ನು ಧ್ಯಾನಿಸುವುದು ಗ್ರಹಪೂಜೆಯನ್ನು ವೀರ್ಯವತ್ತಾಗಿಸಬಲ್ಲದು.

* * *

# ಸಂಧಿ ಶಾಂತಿಗಳು

ಮನುಷ್ಯನ ಪೂರ್ಣಾಯುಸ್ಸು 120 ವರ್ಷಗಳು. **"ಶತಾಯುಃ ಪುರುಷಃ"** ಎಂಬ ಆರ್ಷವಾಣಿಗೂ ನೂರಕ್ಕೆ ಕಡಿಮೆಯಿಲ್ಲದ ಬದುಕು ಮನುಜನದ್ದು ಎಂದೇ ಅರ್ಥ.

ಮನುಜನ ಜೀವಮಾನದಲ್ಲಿ ಪರ್ಯಾಯ ಕ್ರಮದಿಂದ ನವಗ್ರಹಗಳ ಆಧಿಪತ್ಯವಿದೆ. ನೂರಇಪ್ಪತ್ತು ವರ್ಷಗಳನ್ನು ಒಂಭತ್ತು ಪಾಲು ಮಾಡಲಾಗಿದೆ. ಅಷ್ಟಷ್ಟು ವರ್ಷಗಳಲ್ಲಿ ಆಯಾ ಗ್ರಹಗಳ ಆಧಿಪತ್ಯವಿರುವುದರಿಂದ ಅದನ್ನು ಆಯಾ ಗ್ರಹಗಳ ದಶಾಕಾಲ ಎನ್ನಲಾಗುತ್ತದೆ. ಕಾಲದ ಹಂಚಿಕೆ ಹೀಗಿದೆ.

| | |
|---|---|
| ರವಿದಶಾಕಾಲ | 6 ವರ್ಷಗಳು |
| ಚಂದ್ರದಶಾಕಾಲ | 10 ವರ್ಷಗಳು |
| ಕುಜದಶಾಕಾಲ | 7 ವರ್ಷಗಳು |
| ರಾಹುದಶಾಕಾಲ | 18 ವರ್ಷಗಳು |
| ಗುರುದಶಾಕಾಲ | 16 ವರ್ಷಗಳು |
| ಶನಿದಶಾಕಾಲ | 19 ವರ್ಷಗಳು |
| ಬುಧದಶಾಕಾಲ | 17 ವರ್ಷಗಳು |
| ಕೇತುದಶಾಕಾಲ | 7 ವರ್ಷಗಳು |
| ಶುಕ್ರದಶಾಕಾಲ | 20 ವರ್ಷಗಳು |
| **ಒಟ್ಟು** | **120 ವರ್ಷಗಳು** |

ಕೃತ್ತಿಕಾ ನಕ್ಷತ್ರದಲ್ಲಿ ಜನಿಸಿದವನಿಗೆ ಜನ್ಮಕಾಲದಲ್ಲಿ ರವಿದಶೆ ಯಿರುತ್ತದೆ. ರೋಹಿಣಿಯಲ್ಲಿ ಹುಟ್ಟಿದವನಿಗೆ ಜನ್ಮಕಾಲದಲ್ಲಿ ಚಂದ್ರ ದಶೆ. ಹೀಗೆ ಕೃತ್ತಿಕಾದ ಕ್ರಮದಿಂದ ರವಿ, ಚಂದ್ರ, ಕುಜ, ರಾಹು, ಗುರು, ಶನಿ, ಬುಧ, ಕೇತು, ಶುಕ್ರ ಎಂಬ ಕ್ರಮದಿಂದ ದಶೆಗಳು ಸಾಗುತ್ತವೆ. ಇವುಗಳಲ್ಲಿ ಒಂದು ದಶೆ ಮುಗಿದು ಇನ್ನೊಂದು ದಶೆ ಆರಂಭವಾಗುವ ಸಂಧಿಕಾಲದಲ್ಲಿ ಅಪಮಾನ, ಅನಾರೋಗ್ಯ, ಬಂಧು ವಿಯೋಗ ಮುಂತಾದ ದೋಷಗಳು ಸೂಚಿಸಲ್ಪಡುತ್ತವೆ. ಅದರ ನಿವೃತ್ತಿಗಾಗಿ ಶಾಂತಿವಿಧಿ ವಿಹಿತವಾಗಿದೆ. ಈ ಶಾಂತಿಗಳನ್ನು ಗ್ರಹಸಂಧಿಶಾಂತಿ ಎನ್ನಲಾಗುತ್ತದೆ.

ಎಲ್ಲಾ ದಶಾಸಂಧಿಗಳಲ್ಲೂ ಹೋಮವಿಧಿ ಇಲ್ಲ. ಮೂರು ಕಡೆ ಮಾತ್ರ. ಪರಸ್ಪರಶತ್ರುಗ್ರಹಗಳ ಸಂಧಿಯುಂಟಾದಾಗ ಸಂಧಿಶಾಂತಿಯು ಕರ್ತವ್ಯ. ಒಂದು ಕುಜದಶೆ ಮುಗಿದು ರಾಹುದಶೆ ಆರಂಭವಾಗುವ ಕಾಲ. ಇಲ್ಲಿ ನಡೆಸಬೇಕಾದುದು ಕುಜರಾಹುಸಂಧಿಶಾಂತಿ. ಇನ್ನೊಂದು ರಾಹು-ಗುರುಗಳ ಸಂಧಿಯಲ್ಲಿ ರಾಹುಬೃಹಸ್ಪತಿಸಂಧಿಶಾಂತಿ. ಮತ್ತೊಂದು ಶುಕ್ರ-ರವಿ ಸಂಧಿಯಲ್ಲಿ ಶುಕ್ರಾದಿತ್ಯಸಂಧಿಶಾಂತಿ.

ಈ ಸಂಧಿಶಾಂತಿಗಳನ್ನು ಸಂಧಿಕಾಲಕ್ಕಿಂತ ಆರು ತಿಂಗಳು ಮುಂಚೆ ನಡೆಸಬೇಕು. ಅಂದರೆ ಈ ವರ್ಷದ ದಶಂಬರದಲ್ಲಿ ರಾಹು ದಶೆ ಮುಗಿಯುತ್ತಿದ್ದಲ್ಲಿ ಜೂನ್ ಇಲ್ಲವೇ ಜುಲಾಯಿ ತಿಂಗಳಲ್ಲಿ ರಾಹು ಬೃಹಸ್ಪತಿ ಸಂಧಿಶಾಂತಿಯು ಕರ್ತವ್ಯ. ಇದು ಮುಖ್ಯಕಾಲ. ಮುಂದಿನ (ಸಂಧಿಕಾಲತನಕದ) ಐದು ತಿಂಗಳು ಗೌಣಕಾಲ.

**ಹೋಮ :** ಮೂರು ಸಂಧಿಶಾಂತಿಗಳಲ್ಲಿ ಸಮಾನವಾದ ಅಂಶಗಳಿವೆ. ನವಗ್ರಹಗಳಿಗೆ 28ರಂತೆ ಸಮಿತ್-ಚರು-ಆಜ್ಯಗಳಿಂದ ಆಹುತಿ. ಆಯಾ ಸಂಧಿಗೆ ಸಂಬಂಧಿಸಿದ ಎರಡೂ ಗ್ರಹಗಳಿಗೆ ವಿಹಿತ ದ್ರವ್ಯಗಳಿಂದ 108 ಆಹುತಿಗಳು. ಪರಿವಾರ ದೇವತೆಗಳಿಗೆ ಹಾಗು ದಿಕ್ಪಾಲದೇವತೆಗಳಿಗೆ ಆಹುತಿ. ಉಪಪ್ರಧಾನ ದೇವತೆಗಳಾದ ಮೃತ್ಯುಂಜಯ ಮುಂತಾದವರಿಗೆ ಆಹುತಿ.

**ಕಲಶ :** ಎಲ್ಲಾ ಸಂಧಿಶಾಂತಿಗಳಲ್ಲೂ ಎರಡು ಅಥವಾ ಮೂರು ಕಲಶಗಳನ್ನು ಸ್ಥಾಪಿಸಬೇಕು. ಸಂಧಿಗ್ರಹ ದೇವತೆಗಳಿಗೆ ಎರಡು ಕಲಶ. ಇನ್ನೊಂದು ಬೃಹತ್ ಕಲಶದಲ್ಲಿ ಎಲ್ಲಾ ಗ್ರಹಗಳನ್ನೂ, ಪರಿವಾರ ದೇವತೆ-ದಿಕ್ಪಾಲದೇವತೆಗಳನ್ನೂ ಆವಾಹಿಸಿ ಗ್ರಹಮಂತ್ರಗಳಿಂದಲೂ ಸೂಕ್ತಗಳಿಂದಲೂ ಅಭಿಮಂತ್ರಿಸಬೇಕು. ಹೋಮದ ಕೊನೆಯಲ್ಲಿ ಈ ಕಲಶಗಳಿಂದ ಯಜಮಾನ ವರ್ಗಕ್ಕೆ, ವಿಶೇಷವಾಗಿ ಸಂಧಿ ಇರುವ ವ್ಯಕ್ತಿಗೆ ಅಭಿಷೇಕ ಮಾಡಬೇಕು. ಅಭಿಷೇಕ ಕಾಲದಲ್ಲಿ ನವಗ್ರಹಸೂಕ್ತ, ಅಬ್ದೇವತಾ ಸೂಕ್ತಗಳು ಗ್ರಹಪೀಡಾಹರಸ್ತೋತ್ರ ಇವುಗಳನ್ನು ವಿಪ್ರರು ಹೇಳುತ್ತಾರೆ. ಇವುಗಳಲ್ಲಿ ಗ್ರಹಪೀಡಾಹರಸ್ತೋತ್ರಗಳು ಎಲ್ಲಾ ರೀತಿಯ ಗ್ರಹಪೀಡೆಗೂ ನಿವರ್ತಕ. ಅದನ್ನು ಮಾತ್ರ ಇಲ್ಲಿ ಕೊಡಲಾಗಿದೆ.

ಇಲ್ಲಿ ಪುರೋಹಿತರು 'ತೇ(ನಿನ್ನ) ಎಂದು ಹೇಳುವ ಜಾಗದಲ್ಲಿ ಸ್ವತಃ ಹೇಳಿಕೊಳ್ಳುವವನು 'ಮೇ'(ನನ್ನ) ಎನ್ನಬೇಕು.

**ಗ್ರಹಾಣಾಮಾದಿರಾದಿತ್ಯೋ ಲೋಕರಕ್ಷಣಕಾರಕಃ ।**
**ವಿಷಮಸ್ಥಾನಸಂಭೂತಾಂ ಪೀಡಾಂ ಹರತು ಮೇ(ತೇ) ರವಿಃ ॥ 1 ॥**

**ರೋಹಿಣೀಶ ಸುಧಾಮೂರ್ತಿಃ ಸುಧಾಗಾತ್ರಃ ಸುಧಾಶನಃ ।**
**ವಿಷಮಸ್ಥಾನಸಂಭೂತಾಂ ಪೀಡಾಂ ಹರತು ಮೇ(ತೇ) ವಿಧುಃ ॥ 2 ॥**

**ಭೂಮಿಪುತ್ರೋ ಮಹಾತೇಜಾಃ ಜಗತಾಂ ಭಯಕೃತ್ಸದಾ ।**
**ವೃಷ್ಟಿಕೃದ್ವೃಷ್ಟಿಹರ್ತಾ ಚ ಪೀಡಾಂ ಹರತು ಮೇ(ತೇ) ಕುಜಃ ॥ 3 ॥**

**ಉತ್ಪಾತರೂಪೋ ಜಗತಾಂ ಚಂದ್ರಪುತ್ರೋ ಮಹಾದ್ಯುತಿಃ ।**
**ಸೂರ್ಯಪ್ರಿಯಕರೋ ವಿದ್ವಾನ್ ಪೀಡಾಂ ಹರತು ಮೇ(ತೇ) ಬುಧಃ ॥ 4 ॥**

**ದೇವಮಂತ್ರೀ ವಿಶಾಲಾಕ್ಷಃ ಸದಾ ಲೋಕಹಿತೇ ರತಃ ।**
**ಅನೇಕಶಿಷ್ಯಸಂಪೂರ್ಣಃ ಪೀಡಾಂ ಹರತು ಮೇ(ತೇ) ಗುರುಃ ॥ 5 ॥**

**ದೈತ್ಯಮಂತ್ರೀ ಗುರುಸ್ತೇಷಾಂ ಪ್ರಾಣದಶ್ಚ ಮಹಾದ್ಯುತಿಃ ।**
**ಪ್ರಭುಸ್ತಾರಾಗ್ರಹಾಣಾಂ ಚ ಪೀಡಾಂ ಹರತು ಮೇ(ತೇ) ಭೃಗುಃ ॥ 6 ॥**

**ಸೂರ್ಯಪುತ್ರೋ ದೀರ್ಘದೇಹೋ ವಿಶಾಲಾಕ್ಷಃ ಶಿವಪ್ರಿಯಃ ।**
**ಮಂದಚಾರಃ ಪ್ರಸನ್ನಾತ್ಮಾ ಪೀಡಾಂ ಹರತು ಮೇ(ತೇ) ಶನಿಃ ॥ 7 ॥**

**ಮಹಾಶಿರಾಃ ಮಹಾವಕ್ತ್ರೋ ದೀರ್ಘದಂಷ್ಟ್ರೋ ಮಹಾಬಲಃ ।**
**ಅತನುಶ್ಚೋರ್ಧ್ವಕೇಶಶ್ಚ ಪೀಡಾಂ ಹರತು ಮೇ(ತೇ) ತಮಃ ॥ 8 ॥**

**ಅನೇಕರೂಪವರ್ಣಾಶ್ಚ ಶತಶೋಽಥ ಸಹಸ್ರಶಃ ।**
**ಉತ್ಪಾತರೂಪೋ ಜಗತಃ ಪೀಡಾಂ ಹರತು ಮೇ(ತೇ) ಶಿಖೀ ॥ 9 ॥**

**ಪೂಜೆ :** ಅಗ್ನಿಯ ದಕ್ಷಿಣಭಾಗದಲ್ಲಿ ನವಗ್ರಹಮಂಡಲವನ್ನು ರಚಿಸಿ ಪಂಚವರ್ಣಗಳಿಂದ ತುಂಬಿ ಅದರಲ್ಲಿ 'ಮಧ್ಯೇ ತು ಭಾಸ್ಕರಂ ವಿದ್ಯಾತ್' ಮುಂತಾದ ಕ್ರಮದಿಂದ ಗ್ರಹಚಿಹ್ನೆಯನ್ನು ಬರೆದು ಆಯಾ ಧಾನ್ಯಗಳನ್ನಿಟ್ಟು ಗ್ರಹಾವಾಹನೆಯೊಂದಿಗೆ ಗ್ರಹಾಂತಃಸ್ಥಿತ ಲಕ್ಷ್ಮೀನೃಸಿಂಹ ನನ್ನು ಆರಾಧಿಸಬೇಕು. ಅಲ್ಲದೇ ಗ್ರಹಧಾನ್ಯಗಳನ್ನು ಗಂಟುಕಟ್ಟಿ ಆ ಗ್ರಂಥಿಯಲ್ಲೂ ಸಂಧಿಗ್ರಹಗಳನ್ನು ಪೂಜಿಸಬೇಕು. ಉದಾಹರಣೆಗೆ ಶುಕ್ರಾದಿತ್ಯಸಂಧಿಶಾಂತಿಯಲ್ಲಿ ಬಿಳಿಬಟ್ಟೆಯಲ್ಲಿ ಅವರೆಕಾಳನ್ನೂ, ಕೆಂಪು ಬಟ್ಟೆಯಲ್ಲಿ ಗೋಧಿಯನ್ನೂ ಕಟ್ಟಿಡಬೇಕು. ಕುಜರಾಹುಸಂಧಿಶಾಂತಿಯಲ್ಲಿ ಕೆಂಪುವಸ್ತ್ರದಲ್ಲಿ ತೊಗರಿ ಹಾಗೂ ಕಪ್ಪುಬಟ್ಟೆಯಲ್ಲಿ ಉದ್ದನ್ನೂ ಗ್ರಂಥಿಯಾಗಿಸಬೇಕು. ರಾಹುಬೃಹಸ್ಪತಿಸಂಧಿಶಾಂತಿಯಲ್ಲಿ ಕಪ್ಪುಬಟ್ಟೆಯಲ್ಲಿ ಉದ್ದು ಗ್ರಂಥಿಯನ್ನೂ ಹಳದಿಬಣ್ಣದ ಬಟ್ಟೆಯಲ್ಲಿ ಕಡಲೆ ಗ್ರಂಥಿಯನ್ನೂ ಪೂಜಿಸಬೇಕು. ಹೋಮಾನಂತರದಲ್ಲಿ ಕಲಶ ಹಾಗೂ ನವಗ್ರಹಧಾನ್ಯ ಗಳಲ್ಲದೆ ಈ ಗ್ರಂಥಿಗಳನ್ನೂ ಯಥೋಕ್ತ ದಕ್ಷಿಣೆಯೊಡನೆ ಸದ್ಗೃಹಸ್ಥರಿಗೆ ದಾನವೀಯಬೇಕು.

ಪ್ರತಿಯೊಂದು ಸಂಧಿಶಾಂತಿಯಲ್ಲೂ ಪೂರ್ಣಾಹುತಿಯಾದ ಮೇಲೆ ಸಂಧಿಗ್ರಹರಿಗೆ ಶಂಖೋದಕದಿಂದ ಅರ್ಘ್ಯವನ್ನೀಯಬೇಕು. **"ಗೃಹಾಣಾರ್ಘ್ಯಂ ನಮೋಽಸ್ತುತೇ"** ಎಂದು ಕೊನೆಗೊಳ್ಳುವ ಪ್ರತ್ಯೇಕ ಪ್ರತ್ಯೇಕ ಅರ್ಘ್ಯಮಂತ್ರಗಳು ಪ್ರಯೋಗಗ್ರಂಥಗಳಲ್ಲಿ ಉಪಲಬ್ಧವಿವೆ.

* * *

# ಜನನ ಶಾಂತಿಗಳು

ಶಿಶು ಯಾವ ಕಾಲದಲ್ಲಿ ಗರ್ಭವನ್ನು ಪ್ರವೇಶಿಸಿತು ಹಾಗೂ ಯಾವ ಕಾಲದಲ್ಲಿ ಹುಟ್ಟಿತು ಎಂಬ ಎರಡು ಅಂಶಗಳು ಆ ಮಗುವಿನ ಸದ್ಯೋಭವಿಷ್ಯತ್ತಿನ ಜೀವನದ ಬೆಳವಣಿಗೆಗಳಲ್ಲಿ ಪ್ರಮುಖ ಪಾತ್ರವಹಿಸಿವೆ. ಗರ್ಭಾಧಾನಕಾಲದ ದೋಷಗಳು ಮಗುವಿನ ಮನಸ್ಸು, ಬುದ್ಧಿ, ಆರೋಗ್ಯಗಳಿಗೆ ವೈಕಲ್ಯವನ್ನುಂಟುಮಾಡಿದರೆ ಜನನಕಾಲದ ದೋಷಗಳು ಮಗುವಿನೊಂದಿಗೆ ಪಿತೃ, ಮಾತೃ, ಮಾತುಲ ಮೊದಲಾದ ಸಂಬಂಧಿ ಗಳಿಗೂ ದೋಷದಾಯಕವಾಗಿವೆ. ಇದರಲ್ಲಿ ಗರ್ಭಾಧಾನಕಾಲ ಶುದ್ಧವಾಗಿರುವುದು ಪ್ರಾಯಶಃ ನಮ್ಮ ಕೈಯಲ್ಲಿದೆ. ಆದರೆ ಜನನ ಕಾಲ ನಮ್ಮ ಹಿಡಿತದಲ್ಲಿಲ್ಲ. ಈಶ್ವರ ಮಾಯೆಗೆ ಅಧೀನವಾಗಿ ಆ ಮಾಯೆ ನಿರ್ದೇಶಿಸಿದ ಕಾಲದಲ್ಲಿ ಮಗುವಿನ ಜನನ. ಜನ್ಮಾಂತರದ ಕರ್ಮವಿಪಾಕವನ್ನು ಜನನಕಾಲವು ನಿರ್ದೇಶಿಸುತ್ತದೆ. ಜನನ ಕಾಲವು ಬಹಳಷ್ಟು ಅರಿಷ್ಟಗಳನ್ನು ನಿರ್ದೇಶಿಸುತ್ತಿದ್ದರೆ ಶಾಂತಿಗಳ ಮೂಲಕ ಆ ದುಷ್ಟಫಲಗಳನ್ನು ಕಡಿಮೆಗೊಳಿಸಿಕೊಳ್ಳಬಹುದು. ಅಂತಹ ಶಾಂತಿಕರ್ಮ ಗಳನ್ನು **'ಜನನಶಾಂತಿ'** ಎಂದು ವ್ಯವಹರಿಸಲಾಗುತ್ತದೆ.

ಶಾಂತಿಯು ಹೋಮಸ್ವರೂಪದಲ್ಲೇ ಇರಬೇಕೆಂದಿಲ್ಲ. ಕೆಲವೊಮ್ಮೆ ಜಪವೂ ಶಾಂತಿಯೆನಿಸುತ್ತದೆ. ಜನನಕಾಲದ ದೋಷಗಳು ಹಲವು ಬಗೆಯವಿರುವುದರಿಂದ ಜನನ ಶಾಂತಿಗಳು ಅನೇಕ ಬಗೆಯವು. ಪ್ರಸಿದ್ಧ ಜನನಶಾಂತಿಗಳನ್ನು ಇಲ್ಲಿ ಉಲ್ಲೇಖಿಸಲಾಗಿದೆ.

ಗೋಮುಖಪ್ರಸವಶಾಂತಿ

ಪಂಚಮಾರಿಷ್ಟಶಾಂತಿ

ನಾಳವೇಷ್ಟನಶಾಂತಿ

ದರ್ಶ–ಸಿನೀವಾಲೀ–ಕುಹೂಜನನಶಾಂತಿ

ಕೃಷ್ಣಚತುರ್ದಶೀ ಜನನಶಾಂತಿ

ಮೂಲನಕ್ಷತ್ರ ಜನನಶಾಂತಿ

ಆಶ್ಲೇಷಾನಕ್ಷತ್ರಜನನಶಾಂತಿ

ರೋಹಿಣೀನಕ್ಷತ್ರಜನನಶಾಂತಿ

ಏಕನಕ್ಷತ್ರಜನನಶಾಂತಿ

ವೈಧೃತಿ–ವ್ಯತಿಪಾತ–ಸಂಕ್ರಾಂತ್ಯಾದಿಜನನಶಾಂತಿ

ಗ್ರಹಣಜನನಶಾಂತಿ

ಯಮಲಜನನಶಾಂತಿ, ಇತ್ಯಾದಿ.

## ಜನನಶಾಂತಿಕಾಲ :

ಶಿಶುವಿಗೆ ಜಾತಕರ್ಮವಾಗಿರಬೇಕು. ನಾಮಕರಣವಾಗಿರಕೂಡದು. ಈ ಕಾಲದಲ್ಲಿ ಜನನಶಾಂತಿಗಳು ಕರ್ತವ್ಯ. ಕೆಲವರು ನಾಮಕರಣವನ್ನು ಮೊದಲು ಮಾಡಿ ನಂತರದಲ್ಲಿ ಆ ಹೆಸರಿನ ಮಗುವಿಗೆ ಶಾಂತಿ ನಡೆಸುವುದುಂಟು. ಆದರೆ ನಾಮಕರಣಕ್ಕೆ ಮೊದಲೇ ದುಷ್ಟನಕ್ಷತ್ರ, ತಿಥಿ, ಲಗ್ನಾದಿ ಶಾಂತಿ ನೆರವೇರಿಸಿ ನಂತರ ನಾಮಕರಣ ಮಾಡುವುದೇ ಶಾಸ್ತ್ರಸಮ್ಮತವೆನ್ನಿಸುತ್ತಿದೆ. ಪ್ರಯೋಗಪಾರಿಜಾತದ **"ದುಷ್ಟನಕ್ಷತ್ರ–ತಿಥಿ–ಲಗ್ನಜಾತಾನಾಂ ನಾಮಕರ್ಮಣಃ ಶಾಂತಿಹೋಮ ಪುರಃಸರಂ ಕರ್ತವ್ಯತ್ವಾತ್ ತತ್ಪ್ರತಿಪದೋಕ್ತ ಶಾಂತಯೋ ವಕ್ಷ್ಯಂತೇ"** ಎಂಬ ಮಾತು ಇದನ್ನು ಸ್ಪಷ್ಟಪಡಿಸುತ್ತದೆ.

ಶಿಶು ಜನಿಸಿದ ಹನ್ನೊಂದು ಇಲ್ಲವೇ ಹನ್ನೆರಡನೇ ದಿನ ನಾಮಕರಣವು ವಿಹಿತ. ಅಥವಾ ಮುಂದಿನ ಶುಭದಿನದಂದು ಕರ್ತವ್ಯ. ಈ ದಿನದಂದೇ ಮೊದಲು ಶಾಂತಿ ಹೋಮವನ್ನು ಮಾಡಿ ನಂತರ ನಾಮಕರಣ ಮಾಡಬೇಕು. ಜಾತಕರ್ಮವು ಮಗು ಜನಿಸಿದ ಕೂಡಲೇ ನಡೆಯಬೇಕಾದುದು. ಇಂದು ಅದೂ ನಾಮಕರಣದ ಜೊತೆಗೇ ನಡೆಯುವುದರಿಂದ ಶಾಂತಿಹೋಮಗಳಾದ ಮೇಲೆಯೇ ಜಾತಕರ್ಮ ವನ್ನು ನಡೆಸಲಾಗುತ್ತದೆ.

## ಗೋಮುಖಪ್ರಸವಶಾಂತಿ :

ಜನನಶಾಂತಿಗಳಲ್ಲಿ ಸರ್ವಸಾಧಾರಣ ವಾದುದು ಗೋಮುಖಪ್ರಸವ ಶಾಂತಿ. ಅಂದರೆ ಯಾವುದೇ ಜನನ ದೋಷವಿದ್ದರೂ ಮೊದಲು ಗೋಮುಖಪ್ರಸವ ಶಾಂತಿಯನ್ನು ಮಾಡಿ ನಂತರ ಆ ದೋಷನಿಮಿತ್ತದ ಶಾಂತಿಯನ್ನು ನಡೆಸಬೇಕು.

**ಪೂಷಾಶ್ವಿನೋರ್ಗುರೌ ಸಾರ್ಪಮಘಾಚಿತ್ರೇಂದು ಮೂಲಕೇ ।**
**ಋಕ್ಷೇಷ್ವೇತೇಷು ಜಾತಸ್ಯ ಕುರ್ಯಾದ್ಗೋಜನನಂ ಶಿಶೋಃ ॥**

ಎಂಬ ಪ್ರಯೋಗಪಾರಿಜಾತದ ಗರ್ಗವಚನದಂತೆ ರೇವತೀ (ಪೂಷಾ), ಅಶ್ವಿನೀ, ಪುಷ್ಯ(ಗುರು), ಆಶ್ಲೇಷಾ(ಸರ್ಪ), ಮಘಾ, ಚಿತ್ರಾ, ಮೃಗಶಿರಸ್(ಇಂದು), ಮೂಲ ಈ ನಕ್ಷತ್ರಗಳಲ್ಲಿ ಜನಿಸಿದ ಶಿಶುವಿಗೆ ಗೋಜನನಶಾಂತಿಯು ಕರ್ತವ್ಯ.

ಕೃಷ್ಣಪಕ್ಷದ ಚತುರ್ದಶೀ, ಅಮಾವಾಸ್ಯೆಗಳಲ್ಲಿ ಜನಿಸಿದವರಿಗೂ ವೈಧೃತಿ–ವ್ಯತೀಪಾತಗಳಲ್ಲಿ ಜನಿಸಿದವರಿಗೂ ಗೋಜನನ ಶಾಂತಿ ಕರ್ತವ್ಯ.

ಮಗುವನ್ನು ಗೋವು ಪ್ರಸವಿಸಿದಂತೆ ಭಾವಿಸುವ ಶಾಂತಿ ಪ್ರಕ್ರಿಯೆಯೇ ಗೋಮುಖ ಪ್ರಸವಶಾಂತಿಯೆನಿಸಿದೆ. ಇಲ್ಲಿ ಗೋಪೂಜೆ, ಗೋಮುಖಪ್ರಸವ, ಪಂಚಗವ್ಯಸ್ನಾನ ಎಂಬ ಮೂರು ಪ್ರಕ್ರಿಯೆಯಿದೆ.

ತಾಯಿ ದುಷ್ಟಮುಹೂರ್ತದಲ್ಲಿ ಹಡೆದಿದ್ದಾಳೆ. ಅದರ ಶಾಂತಿಗಾಗಿ ಒಳ್ಳೆಯ ಮುಹೂರ್ತದಲ್ಲಿ ಗೋವಿನಿಂದ ಪ್ರಸವ ಮಾಡಿಸಿದಾಗ ಆ ದೋಷಶಮನ ಎಂಬುದು ಈ ಶಾಂತಿಯ ಆಂತರ್ಯ ಎಂದು ಕೆಲವರು ಊಹಿಸುವುದಿದೆ. ಆದರೆ ಇದು ತಪ್ಪು. ಯಾವ ಧರ್ಮಗ್ರಂಥಗಳೂ ಈ ಅಭಿಪ್ರಾಯವನ್ನು ಹೇಳಿಲ್ಲ. ಗೋಪ್ರಸವವು ಒಂದು ಶಾಂತಿ ಅಷ್ಟೇ ಹೊರತು ಗೋಪ್ರಸವದ ಶುಭಮುಹೂರ್ತವು ಶಿಶುವಿನ ಜಾತಕದ ಮೇಲೆ ಪರಿಣಾಮ ಬೀರದು. ಆದ್ದರಿಂದಲೇ ಗೋಪ್ರಸವಕ್ಕೆ ಮುಹೂರ್ತ ವನ್ನು ನೋಡಬೇಕಾಗಿಲ್ಲ. ಶಿಶುಜನಿಸಿದ ಹನ್ನೊಂದು ಇಲ್ಲವೇ ಹನ್ನೆರಡನೇ ದಿನಗಳಲ್ಲಿ ಅಥವಾ ತ್ರಿಜನ್ಮ ನಕ್ಷತ್ರದಲ್ಲಿ ಇಲ್ಲವೇ ಮುಂದಿನ ಜನ್ಮನಕ್ಷತ್ರದ ದಿನದಂದು(ನಾಮಕರಣಕ್ಕಿಂತ ಮೊದಲು) ಈ ಶಾಂತಿಯನ್ನು ಮಾಡಬೇಕು.

**ಗೋಮುಖಪ್ರಸವ ವಿಧಿ :** ಪಂಚಗವ್ಯವನ್ನು ಪ್ರಾಶನ ಮಾಡಿಕೊಂಡು ಗೋಮುಖಪ್ರಸವವನ್ನು ಮಾಡಬೇಕು. ಮನೆಯ ಹೊರಗೆ ಈಶಾನ್ಯ ದಿಕ್ಕಿನಲ್ಲಿ ಸುಲಕ್ಷಣೋಪೇತ ಗೋವನ್ನು ನಿಲ್ಲಿಸಿಕೊಳ್ಳಬೇಕು. ಅಲ್ಲಿಯ ಶುದ್ಧ ಸ್ಥಳದಲ್ಲಿ ರಂಗೋಲಿಯಿಂದ ಸ್ವಸ್ತಿಕೆಯೊಂದನ್ನು ಬರೆದು ಅದರಲ್ಲಿ ಭತ್ತದ ರಾಶಿಯ ಮೇಲೆ ಜಲಕ್ಷಾಲಿತ ಮೊರವನ್ನು ಇಡಬೇಕು. ಮೊರದ ಮೇಲೆ ಕೆಂಪುಬಟ್ಟೆಯನ್ನು ಹಾಸಿ ಅದರ ಮೇಲೆ ಕರಿಎಳ್ಳನ್ನು ಚೆಲ್ಲಬೇಕು. ಈ ಎಳ್ಳಿನ ಮೇಲೆ ಶಿಶುವನ್ನು ಪೂರ್ವಾಭಿಮುಖವಾಗಿ ಮಲಗಿಸಬೇಕು. ಈಗ ಶಿಶುವನ್ನು ಹಾಸಿರುವ ಕೆಂಪುಬಟ್ಟೆಯ ಅಂಚಿನಿಂದ ಆಚ್ಛಾದಿಸಿ, ಇಡೀ ಮೊರದೊಂದಿಗೆ ನೂಲಿನಿಂದ ಸುತ್ತಬೇಕು. ಇದೀಗ ಶಿಶುವಿಗೆ ಗರ್ಭಚೀಲದ ಪರಿಕಲ್ಪನೆಯಾಗಿದೆ.

ಇಲ್ಲಿಯ ಭತ್ತ ಶರೀರದಂತೆಯೂ, ಮೊರ ಉದರದಂತೆಯೂ, ರಕ್ತವಸ್ತ್ರ ಗರ್ಭಚೀಲದಂತೆಯೂ, ತಿಲವು ರಕ್ತ–ಮೇದಸ್ಸಿನಂತೆಯೂ, ಸುತ್ತಿದ ಸೂತ್ರ ಸಿರಗಳಂತೆಯೂ ಭಾಸವಾಗುತ್ತಿದೆ. ಈ ರೀತಿ ನೆಲದ ಮೇಲೆ ಶೂರ್ಪದಲ್ಲಿ ಸುತ್ತಿರುವ ಮಗುವಿನ ಹತ್ತಿರ (ಗೋಗ್ರಾಸವನ್ನು ಇಡುವುದರ ಮೂಲಕ) ಸ್ವರ್ಚಿತವಾದ ಗೋವಿನ ಮುಖವನ್ನು ತರಬೇಕು.

ಆ ಗೋವಿನಿಂದ ಪ್ರಸವವನ್ನು ಭಾವಿಸುತ್ತಾ ತಾಯಿ ಆ ಶಿಶುವನ್ನು ಮೊರದೊಂದಿಗೆ ಪ್ರದಕ್ಷಿಣೆಯಾಗಿ ಗೋವಿನ ಹಿಂಭಾಗಕ್ಕೆ ಹೋಗಿ ಮತ್ತೆ ಮುಂಭಾಗದ ಬತ್ತದ ರಾಶಿಯಲ್ಲಿ ಸ್ಥಾಪಿಸಬೇಕು. ಈ ಸಮಯದಲ್ಲಿ **'ವಿಷ್ಣುರ್ಯೋನಿಂ ಕಲ್ಪಯತು...'** ಎಂಬಿತ್ಯಾದಿ ಋಗ್ವೇದದ ಮಂತ್ರಗಳನ್ನು ಹೇಳುತ್ತಾ 'ವಿಷ್ಣು ಗರ್ಭಯೋನಿಯನ್ನು ಜನನಕ್ಕಾಗಿ ಶುದ್ಧಿಗೊಳಿಸಲಿ. ತ್ವಷ್ಟೃವು ಗರ್ಭದಸ್ವರೂಪವನ್ನು ಸಿದ್ಧಗೊಳಿಸಲಿ. ಪ್ರಜಾಪತಿದೇವನು ಅಲ್ಲಿ ರೇತಃಸ್ಸೇಕವನ್ನು ಸಾಧಿಸಲಿ. ಧಾತಾರನು ಗರ್ಭವನ್ನು ಬೆಳೆಸಲಿ. ವಿಷ್ಣುವಿನ ಶ್ರೇಷ್ಠಸ್ವರೂಪದಿಂದ ಕಂಗೊಳಿಸುವ ಸಂತತಿ ನಮ್ಮದಾಗಲಿ' ಎಂಬಿತ್ಯಾದಿ ಮಂತ್ರಾರ್ಥಚಿಂತನೆಯೊಂದಿಗೆ ವಾಸುದೇವಾದಿ ಚತೂರೂಪಿಯಾದ ಗರ್ಭಾಧಿದೇವತೆ ವಿಷ್ಣುವನ್ನು ಚಿಂತಿಸುತ್ತಾ ಪ್ರಸವವನ್ನು ಭಾವಿಸಬೇಕು.

ಇದೀಗ ಶಿಶುವಿನ ರಕ್ತವಸ್ತ್ರಾಚ್ಛಾದನೆಯನ್ನು ಬಿಚ್ಚಿ ಶಿಶುವನ್ನು ಸ್ನಾನ ಮಾಡಿಸಬೇಕು. ಮತ್ತೆ ಗೋವಿನ ಸನಿಹಕ್ಕೆ ಬಂದು –

**ಗವಾಮಂಗೇಷು ತಿಷ್ಠಂತಿ ಭುವನಾನಿ ಚತುರ್ದಶ ।**
**ಯಸ್ಮಾತ್ ತಸ್ಮಾತ್ ಶುಭಂ ಮೇ ಸ್ಯಾತ್ ಇಹಲೋಕೇ ಪರತ್ರ ಚ ॥**

"ಗೋವಿನ ಅಂಗಗಳಲ್ಲಿ ಚತುರ್ದಶಭುವನವೇ ನೆಲೆನಿಂತಿದೆ. ಇದರ ಸ್ಪರ್ಶಮಾತ್ರದಿಂದ ನಮಗೆ ಐಹಿಕ ಪಾರತ್ರಿಕ ಮಂಗಲವು ಲಭಿಸಲಿ" ಎಂಬ ಶ್ಲೋಕ ಹೇಳುತ್ತಾ ಗೋವಿನ ಅಂಗಗಳನ್ನು ಸ್ಪರ್ಶಿಸಬೇಕು. ಪುರೋಹಿತರು 'ವಿಷ್ಣೋಃ ಶ್ರೇಷ್ಠೇನ' ಎಂಬ ಮಂತ್ರದಿಂದ ಮಗುವನ್ನು ತಾಯಿಯ ಕೈಯಲ್ಲಿಡುತ್ತಾರೆ. ತಾಯಿ ಆ ಮಗುವನ್ನು ಗೋಮುಖದ ಹತ್ತಿರ ನಿಂತುಕೊಂಡು ಗೋಪುಚ್ಛದೇಶದಲ್ಲಿರುವ ತನ್ನ ಪತಿಯ ಕೈಯಲ್ಲಿಡುತ್ತಾಳೆ. ಪತಿಪತ್ನಿಗೆ ಹಸ್ತಾಂತರಿಸುತ್ತಾನೆ.

ಮಗುವನ್ನು ಮತ್ತೆ ರಕ್ತವಸ್ತ್ರದಲ್ಲಿಟ್ಟು ಅದರ ಮುಖವನ್ನು ತಂದೆ ತಾಯಿಯರು ದಿಟ್ಟಿಸುತ್ತಾರೆ. ಪುರೋಹಿತರು ಪೂರ್ವದಲ್ಲೇ ಸಿದ್ಧಗೊಂಡ ಪಂಚಗವ್ಯದಿಂದ ಶಿಶು ಹಾಗು ಜನಕದಂಪತಿಯರನ್ನು ಪ್ರೋಕ್ಷಿಸುತ್ತಾರೆ.

ತಂದೆ ಮಗುವನ್ನೆತ್ತಿಕೊಂಡು 'ನನ್ನ ಅಂಗಾಂಗಗಳ ಶಕ್ತಿಯಿಂದ ಆವಿರ್ಭವಿ-ಸಿದವನು(ಳು) ನೀನು. ಹೃದಯದಿಂದ ಹುಟ್ಟಿ ಬಂದಿದ್ದಿ. ಪುತ್ರನೆಂದರೆ ಸ್ವಾತ್ಮನೇ ಅಲ್ಲವೇ? ಅಂತಹ ನೀನು ಶತ ಶರತ್ಕಾಲ ಬದುಕಿ ಚೆನ್ನಾಗಿರು' ಎಂಬರ್ಥದ **'ಅಂಗಾದಂಗಾತ್'** ಮಂತ್ರವನ್ನು ಉಚ್ಚರಿಸುತ್ತಾ ಮಗುವಿನ ನೆತ್ತಿಯನ್ನು ಆಘ್ರಾಣಿಸುತ್ತಾನೆ.

ಇಷ್ಟು ಕೆಲಸವಾದ ಮೇಲೆ ವಿಪ್ರರಿಂದ ಪುಣ್ಯಾಹವಾಚನ ನಡೆಯುತ್ತದೆ. ನಂತರ ಗೋಮುಖಪ್ರಸವ ಶಾಂತಿಹೋಮ ಅಥವಾ ಇತರ ಶಾಂತಿ ಹೋಮಗಳನ್ನು ನಡೆಸಿ ನಾಮಕರಣಾದಿಗಳನ್ನು ನಡೆಸಲಾಗುವುದು.

**ಹೋಮ :** ಶಾಂತಿಹೋಮಗಳಲ್ಲಿ ಅಗ್ನಿಯ ಹೆಸರು ವರದ. ಮೊಸರು-ಜೇನುತುಪ್ಪಗಳನ್ನು ದ್ವಿಗುಣಪ್ರಮಾಣದಲ್ಲಿ ಸೇರಿಸಿ ಹೋಮಿಸಬೇಕು. ಅಂದರೆ ತುಪ್ಪದ ಎರಡರಷ್ಟು ಜೇನು. ಜೇನಿನ ಎರಡರಷ್ಟು ದಧಿ. ಈ ದಧಿಮಧ್ವಾಜ್ಯ(ತ್ರಿಮಧುರ) ದ್ರವ್ಯದಿಂದ ವಿಷ್ಣು, ನವಗ್ರಹ, ಅಬ್ದೇವತೆ, ರಾಜಯಕ್ಷ್ಮಾ, ರುದ್ರ, ಇಂದ್ರ ಮುಂತಾದ ದೇವತೆಗಳಿಗೆ ಆಹುತಿಯಿದೆ.

ಕಲಶದಲ್ಲೂ ಈ ದೇವತೆಗಳ ಮಂತ್ರಗಳನ್ನು ಜಪಿಸಿ ಶಾಂತಿ ಪ್ರೋಕ್ಷಣೆಯನ್ನು ಮಾಡಿ ವಿಪ್ರಸಂತರ್ಪಣೆ ನಡೆಸಿದಾಗ ಕರ್ಮ ಸಂಪೂರ್ತಿಗೊಳ್ಳುತ್ತದೆ.

* * *

# ಪಂಚಮಾರಿಷ್ಟಶಾಂತಿ

ಮಗು ಜನಿಸಿದ ಹತ್ತುದಿನ ಜಾತಾಶೌಚವಿದೆ. ಈ ಹತ್ತುದಿನದ ಮಧ್ಯೆ ಶಿಶುವಿನ ಜನ್ಮಜಾತಕವನ್ನು ವಿಧಿಬದ್ಧವಾಗಿ ಲಿಪಿಬದ್ಧಗೊಳಿಸುವ ಸಂಪ್ರದಾಯವಿಲ್ಲ. ಆದರೂ ಶಾಂತಿಮಾಡಬೇಕಾದ ದೋಷಗಳು ಜಾತಕದಲ್ಲಿವೆಯೇ ಎಂಬುದನ್ನು ವಿಚಾರಿಸಿಕೊಳ್ಳಬೇಕು. ಜಾತಕಕುಂಡಲಿಯನ್ನು ಗಮನಿಸಿದಾಗ ಗೊತ್ತಾಗುವ ಒಂದು ದೋಷ ಪಂಚಮಾರಿಷ್ಟ.

ಶಿಶುವಿನ ಜನ್ಮಜಾತಕದಲ್ಲಿ ಲಗ್ನದಿಂದ ಐದನೆಯ ಮನೆಯಲ್ಲಿ ಯಾವುದೇ ಗ್ರಹವಿರಕೂಡದು. ಅರ್ಥಾತ್ ವೃಷಭಲಗ್ನದ ಶಿಶುವಿಗೆ ಕನ್ಯಾರಾಶಿಯು ಖಾಲಿಯಾಗಿರಬೇಕು. ಅಲ್ಲಿ ಯಾವುದೇ ಗ್ರಹವಿದ್ದರೂ ಅದು ಅನಿಷ್ಟಸೂಚಕ.

ಲಗ್ನದಿಂದ ಐದನೆಯ ಸ್ಥಾನ ಸಂತಾನಸ್ಥಾನ. ಈ ಭಾವದಿಂದ ಸಂತಾನದ ಸ್ಥಿತಿಗತಿಯನ್ನು ಚಿಂತಿಸಬೇಕು. ಇದೇ ಸ್ಥಾನದಲ್ಲಿ ಗ್ರಹಗಳಿದ್ದಲ್ಲಿ ಆ ಗ್ರಹಗಳು ಸೂಚಿಸುವ ದೋಷವನ್ನು ಪಂಚಮಾರಿಷ್ಟವೆಂದು ಹೇಳಲಾಗುತ್ತದೆ.

ಪದ್ಮಪುರಾಣದಲ್ಲಿ ಈ ಮಾತಿದೆ.

**ಜಾತಸ್ಯ ಪಂಚಮೇ ಲಗ್ನಾತ್(ಲಗ್ನೇ) ಸೂರ್ಯಾದಿಗ್ರಹಸಂಸ್ಥಿತೇ।**
**ಪಿತ್ರಾದೀನಾಮರಿಷ್ಟಂ ತು ಕುರ್ವಂತಿ ಚ ಯಥಾಕ್ರಮಮ್ ॥**

**ರವಿಶ್ಚ ಪಿತರಂ ಹಂತಿ ಮಾತರಂ ಚ ಶಶೀ ತಥಾ ।**
**ಭ್ರಾತರಂ ಭೂಮಿಪುತ್ರಸ್ತು ಮಾತುಲಂ ಚಂದ್ರಜಸ್ತಥಾ ॥**

**ಗುರುರ್ಮಾತಾಮಹಂ ತದ್ವತ್ ಭೃಗುಸ್ತದ್ವತ್‌ಪಿತಾಮಹಮ್ ।**
**ಶನೀ ರಾಹುಃ ಶಿಶುಂ ಹಂತಿ ಶಿಖೀ ಭ್ರಾತರಮೇವ ಚ ।**
**ತದ್ದೋಷ ಪರಿಹಾರಾರ್ಥಂ ಶಾಂತಿಂ ವಕ್ಷ್ಯಾಮ್ಯಶೇಷತಃ ॥**

ಶಿಶುವಿನ ಲಗ್ನದಿಂದ ಪಂಚಮದಲ್ಲಿ ರವಿಯಿದ್ದರೆ ತಂದೆಗೆ ಅನಿಷ್ಟ. ಚಂದ್ರನಿದ್ದರೆ ತಾಯಿಗೆ, ಕುಜನಿಂದ ಭ್ರಾತೃವಿಗೆ, ಬುಧನಿಂದ ಸೋದರ ಮಾವನಿಗೆ, ಗುರುವಿನಿಂದ ಮಾತಾಮಹನಿಗೆ, ಶುಕ್ರನಿಂದ ಪಿತಾಮಹನಿಗೆ, ಶನಿರಾಹುಗಳಿದ್ದರೆ ಸ್ವತಃ ಶಿಶುವಿಗೆ ಅರಿಷ್ಟ. ಕೇತುವಿನಿಂದ ಮತ್ತೆ ಸಹೋದರರರಿಗೇ ಅನಿಷ್ಟ. ಇದರ ಪರಿಹಾರಕ್ಕಾಗಿ ಪಂಚಮಾರಿಷ್ಟ ಶಾಂತಿ.

**ಪಾಲಾಶಸಮಿದಾಜ್ಯೇನ ಚರು–ವ್ರೀಹಿ–ತಿಲೈಃ ಶುಭೈಃ ।**
**ಯತ ಇಂದ್ರೇತಿ ಮಂತ್ರೇಣ ಶತಮಷ್ಟೋತ್ತರಂ ಹುನೇತ್ ॥**

ನವಗ್ರಹಗಳನ್ನು ಆರಾಧಿಸಿ, ಅಭಯಂಕರೇಂದ್ರನನ್ನೂ ಪೂಜಿಸಿ, ಅಗ್ನಿಯಲ್ಲಿ ನವಗ್ರಹಗಳಿಗಲ್ಲದೇ **'ಯತ ಇಂದ್ರ'** ಎಂಬ ಮಂತ್ರದಿಂದ ಪಾಲಾಶಸಮಿತ್, ಆಜ್ಯ, ಚರು, ಭತ್ತ, ತಿಲಗಳಿಂದ 108 ಆಹುತಿ ನೀಡಬೇಕು.

ಇಲ್ಲಿ ಧ್ಯಾನಿಸಬೇಕಾದ ಅಭಯಂಕರೇಂದ್ರನ ಸ್ವರೂಪ ಇಂಥದು

**ಆರೂಢೋ ವಾರಣೇಂದ್ರಂ ದಶಶತನಯನಃ ಶ್ಯಾಮಲಃ ಶ್ಯಾದ್ವಲಾಂಗೀ**
**ವರ್ಮೀ ವೀರಃ ಪ್ರತಾಪೀ ಪ್ರತಿಭಟದಹನಃ ಪ್ರೋಜ್ವಲದ್ವಜ್ರಪಾಣಿಃ ।**
**ದೋರ್ಭಿರ್ದಿವ್ಯಾಯುಧಾಢ್ಯೈರ್ಬಹುಭಿರಭಿವೃತೋ ದೇವಸೇನಾಧಿನಾಥೋ**
**ದತ್ವಾಭೀಷ್ಟಾನಿ ಶಶ್ವತ್ಪರಿಹೃತದುರಿತಃ ಪಾತು ವಿಶ್ವಂ ಮಹೇಂದ್ರಃ ॥**

**ಅರ್ಥ : ವಾರಣೇಂದ್ರಂ ಆರೂಢಃ ದಶಶತನಯನಃ** = ಮದವೇರಿದ ದಿಗ್ಗಜ ಐರಾವತ. ಅದನ್ನೇರಿ ಕುಳಿತಿದ್ದಾನೆ ಸಹಸ್ರಾಕ್ಷ. **ಶ್ಯಾಮಲ ಶ್ಯಾದ್ವಲಾಂಗೀ** = ಶ್ಯಾಮಲವರ್ಣದ ಸುಂದರಗಾತ್ರ, **ವರ್ಮೀ** = ಎದೆಗವಚಿದ ಕವಚವುಳ್ಳವ, **ವೀರಃ ಪ್ರತಾಪೀ** = ಪರಾಕ್ರಮಿ, ಮಹಾಪ್ರತಾಪಿ. **ದಿವ್ಯಾಯುಧಾಢ್ಯೈಃ ಬಹುಭಿಃ ದೋರ್ಭಿಃ ಪರಿವೃತಃ** = ದಿವ್ಯಾಯುಧಗಳುಳ್ಳ ಹಲವು ಬಾಹುಗಳು

ಈತನಿಗೆ. **ಪೋಜ್ವಲದ್ವಜ್ರಪಾಣಿಃ** = ಝಳಪಿಸುತ್ತಿರುವ ಪೊಳೆವ ವಜ್ರಾಯುಧ ಕೈಯಲ್ಲಿ. **ದೇವಸೇನಾಧಿಪಃ ಮಹೇಂದ್ರಃ ಅಭೀಷ್ಟಾನಿ ಶಶ್ವತ್ ದತ್ವಾ** = ಇಂತಹ ದೇವಸೇನಾನಾಯಕ ಮಹೇಂದ್ರನು ನಿರಂತರ ಅಭೀಷ್ಟಗಳನ್ನಿತ್ತು, **ಪರಿಹೃತದುರಿತಃ** = ದುರಿತಗಳನ್ನು ಪರಿಹರಿಸಿ, **ವಿಶ್ವಂ ಪಾತು** = ಜಗವನ್ನು ಪೊರೆಯಲಿ.

ವಿವಸ್ವಂತನ ಮಗ ಯಮನೇ 'ಯತ ಇಂದ್ರ' ಮಂತ್ರದ ದ್ರಷ್ಟಾರ. 'ಹೇ ಇಂದ್ರದೇವ, ಎಲ್ಲೆಡೆಯಿಂದ ಭಯವ ಪರಿಹರಿಸಿ ಅಭಯವನ್ನೀಡು. ಓ ಮಘವನ್, ತೊಂದರೆಯ ನೀಗಿಸು. ನನ್ನನ್ನು ದ್ವೇಷಿಸುವವರನ್ನು ಕೊಂದು ಬಿಡು' ಎಂಬ ಪ್ರಾರ್ಥನೆ ಈ ಮಂತ್ರದಲ್ಲಿದೆ.

ನವಗ್ರಹ ಹೋಮವನ್ನು ಮಾಡಿ ಕಲಶಾಭಿಷೇಕ ಮಾಡುವ ಇನ್ನೊಂದು ಶಾಂತಿ ಪದ್ಧತಿಯೂ ಪ್ರಯೋಗಪಾರಿಜಾತದಲ್ಲಿದೆ.

ಈ ಶಾಂತಿಯನ್ನು ಮಗು ಜನಿಸಿ ಹನ್ನೊಂದು, ಹನ್ನೆರಡನೆ ದಿನದಂದು ಅಥವಾ ಇಪ್ಪತ್ತೇಳು, ಇಪ್ಪತ್ತೆಂಟನೇ ದಿನಗಳಂದು ಬರುವ ಜನ್ಮನಕ್ಷತ್ರ ಶುಭದಿನದಂದು ನಡೆಸಬೇಕು. ಆಗ "ಸರ್ವಾರಿಷ್ಟವಿನಾಶಃ ಸ್ಯಾತ್ ವೇದೋಕ್ತಾಯುರ್ಭವಿಷ್ಯತಿ"

* * *

# ನಾಳವೇಷ್ಟನ ಶಾಂತಿ

ಗರ್ಭಾಂಬುಧಿಯಲ್ಲಿ ಈಜಾಡುವ ಶಿಶು ಹೊಕ್ಕಳ ಬಳ್ಳಿಯ ಮೂಲಕ ಆಹಾರವನ್ನು ಪಡೆಯುತ್ತಾ ಬೆಳೆಯುತ್ತದೆ. ನವಮಾಸ ತುಂಬಿದ ಮೇಲೆ ಕೆಳಮುಖ ಸಂಚಾರಿಯಾದ ಅಪಾನವಾಯುವಿನಿಂದ ದಬ್ಬಲ್ಪಟ್ಟು ಜನಿಸುತ್ತದೆ. ಹೀಗೆ ಜನಿಸುವಾಗ ಕೆಲವೊಮ್ಮೆ ಹೊಕ್ಕಳ ಬಳ್ಳಿಯಿಂದ ವೇಷ್ಟಿತವಾಗಿ ಹುಟ್ಟುವುದುಂಟು. ಕಂಠಕ್ಕೋ, ಹೊಟ್ಟೆಗೋ, ಬಾಹುವಿಗೋ ನಾಭಿನಾಳದಿಂದ ಸುತ್ತಿಕೊಂಡು ಹುಟ್ಟುವುದು ವಿಕೃತಜನನವೆನಿಸುತ್ತದೆ. ಶಾಂತಿ ಕಮಲಾಕರ ತಿಳಿಸುವಂತೆ

**ತ್ರಿರಾವೃತ್ಯಾ ಶಿಶುಂ ಹಂತಿ ದ್ವಿರಾವೃತ್ಯಾ ತು ಮಾತರಮ್ ।**
**ಏಕಾವೃತ್ಯಾ ಮಾತುಲಂ ಚ ಪಾರ್ಶ್ವಯೋಃ ಪಿತರಂ ತಥಾ ॥**
**ಭ್ರಾತರಂ ದಕ್ಷಿಣೇ ಬಾಹೌ ಸ್ವಸಾರಂ ವಾಮಬಾಹುಕೇ ।**
**ತದ್ದೋಷಪರಿಹಾರಾಯ ಶಾಂತಿಂ ಕುರ್ಯಾತ್ ವಿಚಕ್ಷಣಃ ॥**

ನಾಭಿನಾಳವು ಮೂರಾವರ್ತಿ ಸುತ್ತಿಕೊಂಡಿದ್ದರೆ ಬಾಲಾರಿಷ್ಟ. ಅಂದರೆ ಶಿಶುವಿಗೆ ಅನಿಷ್ಟವಿದೆ. ಎರಡು ಸುತ್ತು ಸುತ್ತಿಕೊಂಡಿದ್ದರೆ ತಾಯಿಗೆ ಸಂಬಂಧಿಸಿದ ದೋಷಸೂಚಿತವಾಗಿದೆ. ಒಂದೇ ಸುತ್ತು ಸುತ್ತಿದ್ದರೆ ಬಾಂಧವಾರಿಷ್ಟ. ಅಂದರೆ ಸೋದರಮಾವನಿಗೆ ಅನಿಷ್ಟ. ಉಪವೀತದಂತೆ ಪಾರ್ಶ್ವದಿಂದ ಸುತ್ತಿದ್ದರೆ ಪಿತ್ರರಿಷ್ಟ. ಬಲಬಾಹುವಿಗೆ ಸುತ್ತಿಕೊಂಡಿದ್ದರೆ ಸಹೋದರರಿಗೂ ಎಡಬಾಹುವಿಗಾದರೆ ಸಹೋದರಿಯರಿಗೂ ಅನಿಷ್ಟ.

ಹಾಗೆ ನಾಳವೇಷ್ಟಿತವಾಗಿ ಶಿಶು ಜನಿಸಿದುದರಿಂದ ಈ ಸಂಬಂಧಿ ಗಳಿಗೆ ಅನಿಷ್ಟವುಂಟಾದುದಲ್ಲ, ಇದ್ದ ಅನಿಷ್ಟವು ಈ ಶಕುನದಿಂದ ಸೂಚಿತ ವಾಗಿದೆ.

ಕೆಲವರು ಗೊಣಗುವುದನ್ನು ನಾನು ಕೇಳಿದ್ದೇನೆ. 'ಈತ ರೋಹಿಣಿ ಯಲ್ಲಿ ಹುಟ್ಟಿ ಸೋದರ ಮಾವನನ್ನು ಬಲಿ ತೆಗೆದುಕೊಂಡ' 'ಇವ ಮೂಲದಲ್ಲಿ ಹುಟ್ಟಿ ಅಜ್ಜನನ್ನು ಮೂಲೆಗೆ ತಳ್ಳಿದ' 'ಈತ ನಾಳವೇಷ್ಟನದಿಂದ ನನ್ನನ್ನು ಆಸ್ಪತ್ರೆಗೆ ಸೇರಿಸಿದ' ಇತ್ಯಾದಿ. ಶಾಸ್ತ್ರವನ್ನು ಬಲ್ಲ ವಿವೇಕಿಯು ಈ ರೀತಿ ಗೊಣಗುವುದಿಲ್ಲ. ಆತ ಇಂತಹ ಶಕುನಗಳುಂಟಾದಾಗ ಖುಷಿ ಪಡುತ್ತಾನೆ. ದೈವದಿಷ್ಟವಾದ ಅರಿಷ್ಟವು ಪೂರ್ವಭಾವಿಯಾಗಿ ಸೂಚಿತವಾದದ್ದರ ಬಗ್ಗೆ ಕೃತಜ್ಞತೆಯಿಂದ ದೇವರಿಗೆ ಕೈ ಮುಗಿಯುತ್ತಾನೆ. ಆ ಅರಿಷ್ಟದ ಶಾಂತಿಗಾಗಿ ಹೋಮಾದ್ಯನುಷ್ಠಾನಗಳಲ್ಲಿ ನಿರತನಾಗುತ್ತಾನೆ. ಈ ಶಾಂತಿಗೆ **'ನಾಳವೇಷ್ಟನಶಾಂತಿ'** ಎಂದು ಹೆಸರು.

ನಾಳ ಎಂದರೆ ನಾಡಿ, ಹೊಕ್ಕಳಬಳ್ಳಿ, ವೇಷ್ಟನ ಎಂದರೆ ಬಳಸುವಿಕೆ. ನಾಡೀವೇಷ್ಟನವೆಂದೂ ಕರೆಯುವುದಿದೆ.

ಈ ಶಾಂತಿಯಲ್ಲಿ ಗೋಮುಖಪ್ರಸವ ಹಾಗೂ ಶಾಂತಿಹೋಮವಿದೆ. ಹೋಮದಲ್ಲಿ ಜನ್ಮನಕ್ಷತ್ರದೇವತೆಗೂ, ಗಣಪತಿಗೂ, ಯಮನಿಗೂ ಅಮೃತವಲ್ಲಿ, ಗರಿಕೆ ಮೊದಲಾದ ಆಯುಃಪ್ರದ ದ್ರವ್ಯಗಳಿಂದ ಆಹುತಿ ಯಿತ್ತು **'ಮೃತ್ಯುರ್ನಶ್ಯತು, ಆಯುರ್ವರ್ಧತಾಮ್'** ಎನ್ನುತ್ತಾ ವ್ಯಾಹೃತಿ ಹೋಮವನ್ನು ನಡೆಸಬೇಕು. ಕೊನೆಗೆ ಕಲಶಪ್ರೋಕ್ಷಣೆ. ಇಷ್ಟಾದರೆ **'ಸರ್ವಾನ್ ಕಾಮಾನವಾಪ್ನೋತಿ ಸುಖೀ ಭೂತ್ವಾ ಚಿರಂ ವಸೇತ್'**

* * *

# ಅಮಾವಾಸ್ಯೆಗೆ ಸಂಬಂಧಿಸಿದ ಜನನಶಾಂತಿಗಳು

ಮನಸ್ಸಿನ ದೇವತೆ ಚಂದ್ರ. **'ಚಂದ್ರಮಾ ಮನಸೋ ಜಾತಃ'** ಎಂಬ ಆರ್ಷವಾಣಿಯಂತೆ ವಿರಾಟ್ ಪುರುಷನ ಮನಸ್ಸಿನಿಂದಲೇ ಆವಿರ್ಭೂತನಾದವ ಇವ. ಚಂದ್ರಶಕ್ತಿಯು ಈ ಭೂತಲದ ವಾತಾವರಣದಲ್ಲಿ ಅತ್ಯಂತ ಕ್ಷೀಣಿಸಿರುವ ದಿನ ಅಮಾವಾಸ್ಯೆ. ಅದರ ಹಿಂದಿನ ದಿನವಾದ ಚತುರ್ದಶಿಯೂ ಬಹ್ವಂಶದಲ್ಲಿ ಅಮಾವಾಸ್ಯೆಯನ್ನೇ ಹೋಲುತ್ತದೆ. ಕೃಷ್ಣಪಕ್ಷದ ಚತುರ್ದಶಿಯಾದ್ದರಿಂದ ಇದನ್ನು **'ಕೃಷ್ಣಚತುರ್ದಶೀ'** ಎನ್ನಲಾಗಿದೆ.

ಅಮಾವಾಸ್ಯೆಯಲ್ಲಿ ಸಿನಿವಾಲೀ, ಕುಹೂ, ದರ್ಶ ಎಂಬ ಮೂರು ಪ್ರಭೇದಗಳಿವೆ.

ಅಮಾವಾಸ್ಯೆಯು ಚತುರ್ದಶಿಯೊಂದಿಗೆ ಕೂಡಿದ್ದರೆ ಆ ದಿನದ ಅಮಾವಾಸ್ಯೆಗೆ **'ಸಿನೀವಾಲೀ'** ಎಂದು ಹೆಸರು. ಅಮಾವಾಸ್ಯೆಯು ಪ್ರತಿಪತ್ ನಿಂದ ಸಂಯುಕ್ತವಾಗಿದ್ದರೆ **'ಕುಹೂ'** ಎಂದು ಕರೆಸಿಕೊಳ್ಳುತ್ತದೆ. ಅಥವಾ ಚಂದ್ರನು ಅಲ್ಪವಾದರೂ ಕಾಣಿಸುವ ಅಮಾವಾಸ್ಯೆ ಸಿನೀವಾಲೀ, ಸ್ವಲ್ಪವೂ ಕಾಣದ ಅಮಾವಾಸ್ಯೆ ಕುಹೂ. **'ದೃಷ್ಟಚಂದ್ರಾ ಸಿನೀವಾಲೀ ನಷ್ಟಚಂದ್ರಾ ಕುಹೂರ್ಮತಾ'**. ಪೂರ್ವಾಪರ ವೇಧವಿಲ್ಲದ ಶುದ್ಧ ಅಮಾವಾಸ್ಯೆಗೆ ದರ್ಶ ಎಂದು ಹೆಸರು. (ಅಮಾವಾಸ್ಯಾ ತಿಥಿಯು ಮಧ್ಯಭಾಗದ ಆರು ಘಳಿಗೆಗಳು ದರ್ಶ ಎಂಬ ಪಕ್ಷವಿದ್ದರೂ ಅದು ಪಿತೃಕರ್ಮಗಳಿಗೆ ಸಂಬಂಧಪಟ್ಟುದು.

ಜನನಶಾಂತಿಯ ವಿಷಯದಲ್ಲಿ ಅದು ಅನುಪಯುಕ್ತ, ಸಿನೀವಾಲೀ ಕುಹೂ, ಎಂಬ ಈರ್ವರು ದಕ್ಷ ಪುತ್ರಿಯರು. ಪೂರ್ವಾಪರವಿದ್ಧ ಅಮಾವಾಸ್ಯೆಗೆ ಅಭಿಮಾನಿಗಳಾದ್ದರಿಂದ ಅವರಿಗೆ ಆ ಹೆಸರು ಬಂದಿದೆ. ಶ್ರುತಿಯು ಹಾಗೆಂದಿದೆ. **'ಯಾ ಪೂರ್ವಾಮಾವಾಸೀ ಸಾ ಸಿನೀವಾಲೀ ಯೋತ್ತರಾ ಸಾ ಕುಹೂಃ'** ಸೂರ್ಯ ಚಂದ್ರರು ಜೊತೆಗೆ ದೃಶ್ಯರಾದ್ದರಿಂದ ಶುದ್ಧಾಮಾಸ್ಯೆಗೆ **'ದರ್ಶ'** ಎಂದು ಹೆಸರು. **'ದರ್ಶಃ ಸೂರ್ಯೇಂದು ಸಂಗಮಃ'** ಎಂದಿದ್ದಾನೆ ಅಮರಸಿಂಹ.

ಈ ಸಿನೀವಾಲೀ, ದರ್ಶ, ಕುಹೂಗಳೆಂಬ ಅಮಾವಾಸ್ಯೆಯಲ್ಲಿ ಮಾತ್ರವಲ್ಲದೇ ಕೃಷ್ಣಚತುರ್ದಶಿಯಂದೂ ಮಗು ಜನಿಸಿದರೆ ದೋಷವಿದೆ. ಅಮಾವಾಸ್ಯೆಯ ದಿನದಲ್ಲಿ ಮನೆಯ ಹಸು-ಎಮ್ಮೆಗಳು ಕರುಹಾಕಿದರೂ ಆ ಕರುವನ್ನೂ ಹಸುವನ್ನೂ ಪರಿತ್ಯಜಿಸಬೇಕೆಂಬಷ್ಟು ಕಟು ಆದೇಶವು ಧರ್ಮಶಾಸ್ತ್ರದಲ್ಲಿದೆ. ಅಂದು ಮಗು ಜನಿಸಿದರೆ ಪರಿತ್ಯಾಗದ ವಿಧಿಯನ್ನು ಹೇಳಿದ್ದರೂ ಶಾಂತಿವಿಧಿಯನ್ನು ಒತ್ತಿ ಹೇಳಿದೆ. ಈ ಸಂದರ್ಭದಲ್ಲಿ ನಡೆಸುವ ಶಾಂತಿಗಳೇ ಕೃಷ್ಣಚತುರ್ದಶೀ ಜನನಶಾಂತಿ, ಸಿನಿವಾಲೀ ಜನನಶಾಂತಿ, ಕುಹೂಜನನಶಾಂತಿ ಹಾಗೂ ದರ್ಶಜನನಶಾಂತಿ.

ಈ ಎಲ್ಲಾ ಶಾಂತಿಯಲ್ಲೂ ಗೋಮುಖಪ್ರಸವ ನಡೆಸಿ ಗ್ರಹಯಜ್ಞ ದೊಂದಿಗೆ ವಿಹಿತಮಂತ್ರಗಳಿಂದ ಹೋಮಿಸಬೇಕು.

**ಕೃಷ್ಣಚತುರ್ದಶೀ ಜನನಶಾಂತಿ :** ಕೃಷ್ಣಚತುರ್ದಶಿಯ ಆದಿಭಾಗದಲ್ಲಿ ಜನಿಸಿದರೆ ದೋಷವಿಲ್ಲ. ಅಲ್ಲಿ ಶಾಂತಿವಿಧಿ ಬೇಡ. ಗರ್ಗಾಚಾರ್ಯರು ಹೇಳುವಂತೆ-

**ಕೃಷ್ಣಪಕ್ಷೇ ಚತುರ್ದಶ್ಯಾಂ ಪ್ರಸೂತೇ ಷಡ್ವಿಧಂ ಫಲಮ್ ।**
**ಚತುರ್ದಶೀಂ ಚ ಷಡ್ಭಾಗಂ ಕುರ್ಯಾದಾದೌ ಶುಭಂ ಸ್ಮೃತಮ್ ॥**

**ದ್ವಿತೀಯೇ ಪಿತರಂ ಹಂತಿ ತೃತೀಯೇ ಮಾತರಂ ತಥಾ ।**
**ಚತುರ್ಥೇ ಮಾತುಲಂ ಹಂತಿ ಪಂಚಮೇ ವಂಶನಾಶನಮ್ ॥**

**ಷಷ್ಠೇ ತು ಧನಹಾನಿಃ ಸ್ಯಾತ್ ಆತ್ಮನೋ ವಂಶನಾಶನಮ್ ।**
**ತಸ್ಮಾತ್ ಸರ್ವಪ್ರಯತ್ನೇನ ಶಾಂತಿಂ ಕುರ್ಯಾದ್ವಿಧಾನತಃ ॥**

ಕೃಷ್ಣಚತುರ್ದಶಿಯನ್ನು ಆರುಭಾಗವಾಗಿಸಬೇಕು. ಸುಮಾರು 60 ಘಳಿಗೆಯ ಚತುರ್ದಶಿಯಲ್ಲಿ 10 ಘಳಿಗೆಯ ಆರುಭಾಗಗಳಾಗುತ್ತವೆ. ಒಂದು ವೇಳೆ 57 ಘಳಿಗೆಗಳೇ ಪೂರ್ಣಘಟಿಯಾಗಿದ್ದಲ್ಲಿ ಒಂಭತ್ತೂ-ವರೆ ಘಳಿಗೆಯ ಆರುಭಾಗಗಳು. ಇದರಲ್ಲಿ ಮೊದಲ ಭಾಗದಲ್ಲಿ ಜನಿಸಿದರೆ ಶುಭಫಲ ಅಂದರೆ ಶಾಂತಿಯು ಬೇಡ. ಎರಡನೆಯ ಭಾಗದಲ್ಲಿ ಶಿಶು ಜನಿಸಿದ್ದರೆ ಪಿತ್ರರಿಷ್ಟ, ತೃತೀಯದಲ್ಲಿ ಮಾತ್ರರಿಷ್ಟ. ಚತುರ್ಥದಲ್ಲಿ ಮಾತುಲಾರಿಷ್ಟ. ಪಂಚಮದಲ್ಲಿ ವಂಶಾರಿಷ್ಟ. ಷಷ್ಠದಲ್ಲಿ ಅಂದರೆ ಕೊನೆಯ ಭಾಗದಲ್ಲಿ ಜನಿಸಿದರೆ ಧನಹಾನಿಯೂ, ವಂಶಹಾನಿಯೂ ಫಲವಾಗಿದೆ. ಹಾಗಾಗಿ ಶಾಂತಿಯನ್ನು ನಡೆಸಬೇಕು.

ಇಲ್ಲಿ ಗಮನಿಸಬೇಕಾದ ಒಂದು ಅಂಶವಿದೆ. ಸಾಮಾನ್ಯವಾಗಿ ಸೂರ್ಯೋದಯ ಕಾಲದಲ್ಲಿ ಇರುವ ತಿಥಿಯೇ ಅಂದಿನ ಎಲ್ಲಾ ಕಾರ್ಯಗಳಿಗೂ ಪರಿಗಣಿಸಲ್ಪಡುತ್ತದೆ. ಬೆಳಿಗ್ಗೆ ತ್ರಯೋದಶೀ ಒಂದೇ ಘಳಿಗೆಯಿದ್ದು ಆಮೇಲೆ ಪೂರ್ತಿ ಚತುರ್ದಶಿಯಿದ್ದರೂ ನಾವು ಸಾಯಂ ಸಂಧ್ಯೆಗೆ ಸಂಕಲ್ಪಿಸುವಾಗ **'ತ್ರಯೋದಶ್ಯಾಂ ಶುಭತಿಥೌ'** ಎಂದೇ ಉಲ್ಲೇಖಿಸಬೇಕು. ಅದೇ ದಿನ ಸಾಯಂಕಾಲ ಮಗು ಜನಿಸಿದರೆ ಅದರ ಜನ್ಮತಿಥಿ ತ್ರಯೋದಶಿಯೆಂದೇ ಉಲ್ಲೇಖಿಸಲ್ಪಡುತ್ತದೆ. ಹೊರತು ಚತುರ್ದಶಿಯೆಂದಲ್ಲ. ಇಲ್ಲೆಲ್ಲಾ ವ್ಯಾವಹಾರಿಕ ತಿಥಿಯೇ ಗ್ರಾಹ್ಯ. ತಾತ್ಕಾಲಿಕ ತಿಥಿಯಲ್ಲ. **'ಪಾರಣೇ ಮರಣೇ ಚೈವ ತಿಥಿಸ್ತಾತ್ಕಾಲಿಕೀ ಮತಾ'** ಎಂಬ ಸ್ಮೃತಿಯಂತೆ ದ್ವಾದಶಿ(ಸಾಧನ) ಪಾರಣೆಗೆ ಮತ್ತು ಮರಣ(ಶ್ರಾದ್ಧಾದಿಗಳಿಗೆ) ವಿಷಯದಲ್ಲಿ ತಾತ್ಕಾಲಿಕ ತಿಥಿಯನ್ನು ಗ್ರಹಿಸಬೇಕು. ಹಿಂದೆ ಹೇಳಿದ ತ್ರಯೋದಶಿಯಂದು ಸಾಯಂಕಾಲದ ಹೊತ್ತು ಓರ್ವ ವ್ಯಕ್ತಿ ಮೃತನಾದರೆ ಆತನ ಮೃತತಿಥಿ ತಾತ್ಕಾಲಿಕವಾದ ಚತುರ್ದಶಿಯೆಂದೇ ಪರಿಗಣಿಸಬೇಕು. ವಿನಃ ತ್ರಯೋದಶಿಯಲ್ಲ.

ಹಾಗೆಯೇ ಜನನಶಾಂತಿಯ ವಿಚಾರದಲ್ಲೂ ತಾತ್ಕಾಲಿಕ ತಿಥಿಯನ್ನೇ ಪರಿಗಣಿಸಬೇಕು. ಅಲ್ಪತ್ರಯೋದಶಿಯುಳ್ಳ ಕೃಷ್ಣಪಕ್ಷದ ದಿನದಂದು ಸಾಯಂ ಮಗು ಜನಿಸಿದರೆ ಆ ನಿಮಿತ್ತ ಕೃಷ್ಣಚತುರ್ದಶೀ ಜನನ ಶಾಂತಿಯನ್ನು ನಡೆಸಬೇಕು. ಚತುರ್ದಶಿಯಂದು ಮಧ್ಯಾಹ್ನ ಅಮಾವಾಸ್ಯೆಯಿದ್ದು ಆಗ ಮಗು ಜನಿಸಿದರೆ ಸಿನೀವಾಲೀ ಜನನ ಶಾಂತಿಯು ಕರ್ತವ್ಯವಾಗಿದೆ.

ಕೃಷ್ಣಚತುರ್ದಶೀ ಜನನಶಾಂತಿಯಲ್ಲಿ ತ್ರ್ಯಂಬಕರುದ್ರ ಪ್ರಧಾನ ದೇವತೆ. ತ್ರ್ಯಂಬಕಮಂತ್ರದಿಂದ 1008 ಅಥವಾ 108 ತಿಲಾಹುತಿಯನ್ನಿತ್ತು ಕಲಶಾಭಿಷೇಕವನ್ನು ಮಾಡಬೇಕು. ವೇದವೇತ್ತಾರನಾದ ವಿಪ್ರನಿಗೆ ಸರ್ವಾಲಂಕಾರಯುಕ್ತ ಗೋವನ್ನು ಅಥವಾ ಸುವರ್ಣದೊಂದಿಗೆ ವಸ್ತ್ರದ್ವಯವನ್ನು ದಾನವೀಯುವುದೂ ಶಾಂತಿವಿಧಿಯಲ್ಲಿ ಸೇರಿದೆ. ಆಗ

**ಏವಂ ಯಃ ಕುರುತೇ ಶಾಂತಿಂ ಸರ್ವಪಾಪೈರ್ವಿಮುಚ್ಯತೇ ।**
**ಸರ್ವಾನ್ ಕಾಮಾನವಾಪ್ನೋತಿ ಚಿರಜೀವೀ ಸುಖೀ ಭವೇತ್ ॥**

* * *

# ವಯೋಽವಸ್ಥಾ ಶಾಂತಿಗಳು

ನೂರು ವರುಷಗಳ ಕಾಲ ಗಟ್ಟಿಮಟ್ಟಾಗಿ ಬಾಳಬಲ್ಲ ಈ ಮಾನವ ದೇಹಕ್ಕೆ ಐವತ್ತು ಎಂಬುದು ಮಧ್ಯಾವಧಿ ಕಾಲಘಟ್ಟ. ಇಲ್ಲಿಯ ತನಕ ಬೆಳೆಯುತ್ತಾ ವಿಕಸನಶೀಲವಾಗಿದ್ದ ಶರೀರವು ಐವತ್ತರ ನಂತರ ಕ್ಷೀಣಿಸ ತೊಡಗುತ್ತದೆ. ಧರ್ಮಕರ್ಮಗಳಲ್ಲಿ ಹೆಚ್ಚಾಗಿ ತೊಡಗಬೇಕಾದ ಕಾಲ ಸನ್ನಿಹಿತವಾಗಿದೆ. ಅದಕ್ಕಾಗಿ ಐವತ್ತರಿಂದ ಆರಂಭಿಸಿ ನೂರುವರ್ಷದ ತನಕ ಹನ್ನೆರಡುಶಾಂತಿಗಳನ್ನು ಪ್ರಾಚೀನರು ತಿಳಿಸಿದ್ದಾರೆ. ಇವುಗಳು ಸುಮಾರು ಐದುವರ್ಷಗಳಿಗೊಂದರಂತೆ ಒದಗುತ್ತವೆ. ಅವುಗಳೆಂದರೆ – ವೈಷ್ಣವೀಶಾಂತಿ, ವಾರುಣೀಶಾಂತಿ, ಉಗ್ರರಥಶಾಂತಿ, ಭೀಮರಥಶಾಂತಿ, ಐಂದ್ರೀಶಾಂತಿ, ವಿಜಯರಥಶಾಂತಿ, ಸಹಸ್ರಚಂದ್ರದರ್ಶನಶಾಂತಿ, ರೌದ್ರೀಶಾಂತಿ, ಸೌರೀಶಾಂತಿ, ತ್ರ್ಯಂಬಕಮೃತ್ಯುಂಜಯಶಾಂತಿ ಹಾಗೂ ಮಹಾಮೃತ್ಯುಂಜಯಶಾಂತಿ. ಇವುಗಳ ಅನ್ವಾಧಾನ ಮೊದಲಾದ ವಿವರಗಳನ್ನು 'ವಯೋಽವಸ್ಥಾಶಾಂತಿಸಂಗ್ರಹ'ವೆಂಬ ಗ್ರಂಥ ತಿಳಿಸುತ್ತದೆ. ಉಡುಪಿಯಿಂದ ಪ್ರಕಾಶಿತವಾದ 'ಅನ್ವಾಧಾನಸಂಗ್ರಹ' ಎಂಬ ಹೊತ್ತಿಗೆಯಲ್ಲೂ ಇವುಗಳ ಮಾಹಿತಿಯಿದೆ.

**ವೈಷ್ಣವೀ ಶಾಂತಿ :** ಇದು ಐವತ್ತನೇ ವರ್ಷದ ಶಾಂತಿ. ನಲವತ್ತೊಂಭತ್ತು ಭರ್ತಿಯಾಗಿ ಐವತ್ತನೇ ವರ್ಷ ಆರಂಭವಾಗುವ ಜನ್ಮಮಾಸದ ಜನ್ಮ ನಕ್ಷತ್ರದಂದು ಅನುಷ್ಠೇಯ. ಇಲ್ಲಿ ವಿಷ್ಣುಸೂಕ್ತದ ಒಂದು ಮಂತ್ರ(ವಷಟ್ ತೇ)ದಿಂದ ಮಹಾವಿಷ್ಣುವಿಗೆ ಆಹುತಿಯಿದೆ. ಅಶ್ವತ್ಥಸಮಿತ್, ಚರು, ಆಜ್ಯ, ಪಾಯಸಗಳು ಹೋಮದ್ರವ್ಯಗಳು.

**ವಾರುಣೀಶಾಂತಿ :** ಐವತ್ತೈದನೇ ವರ್ಷದ ಶಾಂತಿ ವಾರುಣೀಶಾಂತಿ. ಐವತ್ತೈದರ ಆರಂಭದ ಜನ್ಮಮಾಸದಲ್ಲಿ ಇದರ ಅನುಷ್ಠಾನ. ಇಲ್ಲಿ ವರುಣದೇವನಿಗೆ ಆಹುತಿಯಿದೆ. ತ್ರ್ಯಂಬಕರುದ್ರನಿಗೂ, ಜನ್ಮನಕ್ಷತ್ರ ದೇವತೆಗೂ ತಿಲ, ಆಜ್ಯಗಳಿಂದ ಆಹುತಿಯಿದೆ.

**ಉಗ್ರರಥಶಾಂತಿ :** ಅರವತ್ತು ಪೂರ್ತಿಯಾದಾಗ ನಡೆಸುವ ಈ ಶಾಂತಿಯ ಬಗ್ಗೆ ಮುಂದೆ ಪ್ರತ್ಯೇಕ ಲೇಖನವಿದೆ. ಇದೇ ಷಷ್ಟಿಪೂರ್ತಿಶಾಂತಿ.

**ಮಹಾರಥಶಾಂತಿ :** ಅರವತ್ತೈದರ ಆರಂಭದಲ್ಲಿ ನಡೆಸಲ್ಪಡುವ ಶಾಂತಿ. ಮಹಾರಥನೆಂಬ ಮೃತ್ಯುಂಜಯ ಇಲ್ಲಿ ಪ್ರಧಾನದೇವತೆ. ಜನ್ಮನಕ್ಷತ್ರ ದೇವತೆಗೂ ಆಹುತಿಯಿದೆ.

**ಭೀಮರಥಶಾಂತಿ :** ಎಪ್ಪತ್ತನೇ ವರ್ಷದ ಆರಂಭದಲ್ಲಿ ನಡೆಸುವ ಶಾಂತಿ. ಇದನ್ನೇ ಸಪ್ತತಿಶಾಂತಿಯೆನ್ನುವುದು ಮುಂದೆ ಇದರ ವಿವರವಿದೆ.

**ಐಂದ್ರೀಶಾಂತಿ :** ಎಪ್ಪತ್ತೈದನೇ ವರ್ಷದ ಆರಂಭದ ಶಾಂತಿಯಿದು. ಇಂದ್ರ ಪ್ರಧಾನದೇವತೆ.

**ವಿಜಯರಥಶಾಂತಿ :** ಎಪ್ಪತ್ತೆಂಟನೇ ವರ್ಷದಲ್ಲಿ ಆಚರಿಸಬೇಕಾದ ಶಾಂತಿಯಿದು. ಮುಂದೆ ಇದರ ವಿವರವಿದೆ.

**ಸಹಸ್ರಚಂದ್ರದರ್ಶನಶಾಂತಿ :** ಎಂಭತ್ತೊಂದನೇ ವರ್ಷದ ಶಾಂತಿಯಿದು. ಮುಂದೆ ವಿವರವಿದೆ.

**ರೌದ್ರೀಶಾಂತಿ :** ಎಂಭತ್ತೈದನೇ ವರ್ಷದ ಶಾಂತಿ. ಮೃತ್ಯುಂಜಯ ರುದ್ರ ಪ್ರಧಾನದೇವತೆ.

**ಸೌರೀಶಾಂತಿ :** ತೊಂಭತ್ತರ ಶಾಂತಿಯಿದು. ಸೂರ್ಯದೇವತಾಕವಾದುದರಿಂದ ಇದು ಸೌರೀಶಾಂತಿ.

**ತ್ರ್ಯಂಬಕಮೃತ್ಯುಂಜಯಶಾಂತಿ :** ತೊಂಭತ್ತೈದು ವರ್ಷ ಆರಂಭವಾಗುತ್ತಿರುವಾಗ ನಡೆಸುವ ಶಾಂತಿಯಿದು. ಪ್ರಣವವ್ಯಾಹೃತಿಸಂಪುಟಿತ ತ್ರ್ಯಂಬಕ ಮಂತ್ರದಿಂದ ಮೃತ್ಯುಂಜಯರುದ್ರನಿಗೆ ಆಹುತಿಯಿದೆ.

**ಮಹಾಮೃತ್ಯುಂಜಯಶಾಂತಿ :** 'ಶತಮಾನಶಾಂತಿ' ಎಂದು ಇದನ್ನೇ ಕರೆಯುವುದು. ನೂರುವರ್ಷದ ಆರಂಭದಲ್ಲಿ ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳೆಲ್ಲಾ ಸೇರಿ ನಡೆಸುವ ಶಾಂತಿಯಿದು. 'ಮಹಾಮೃತ್ಯುಂಜಯ' ಎಂದು ಕರೆಸಿಕೊಳ್ಳುವ ಸಂಜೀವಿನೀಮೃತ್ಯುಂಜಯ ಮಂತ್ರದಿಂದ ಹೋಮವಿದೆ.

ಇವು ಹನ್ನೆರಡು ವಯೋಽವಸ್ಥಾಶಾಂತಿಗಳು. ಇವುಗಳೆಲ್ಲಾ ಇಂದು ನಮ್ಮಲ್ಲಿ ಬಳಕೆಯಲ್ಲಿಲ್ಲ. ಉಗ್ರರಥ, ಭೀಮರಥ, ವಿಜಯರಥ, ಸಹಸ್ರ ಚಂದ್ರದರ್ಶನಗಳೆಂಬ ನಾಲ್ಕು ಶಾಂತಿಗಳು ಎಲ್ಲೆಡೆ ಅನುಷ್ಠಾನದಲ್ಲಿವೆ. ವೈಷ್ಣವೀಶಾಂತಿ ಮೊದಲಾದವು ಅವಶ್ಯಾನುಷ್ಠೇಯಗಳಲ್ಲ. ಪ್ರಾಮಾಣಿಕವಾದ ಧರ್ಮನಿಷ್ಠ ಜೀವನ ಮುಖ್ಯ. ಅದನ್ನು ನೆನಪಿಸುವ ಮೈಲಿಗಲ್ಲುಗಳು ಈ ಶಾಂತಿಗಳು 'ನಿನಗೆ ವಯಸ್ಸಾಗಿದೆ. ಇಲ್ಲಿಗೆ ದೂರವಾಗುತ್ತಿದ್ದು ಅಲ್ಲಿಗೆ ಹತ್ತಿರವಾಗುತ್ತಿರುವಿ. ಪಾರತ್ರಿಕಸಾಧನೆಯನ್ನು ಹೆಚ್ಚು ಹೆಚ್ಚು ಮಾಡು'. ಎಂಬುದನ್ನು ನೆನಪಿಸುವುದು ಈ ಶಾಂತಿಗಳ ಉದ್ದೇಶ. ಈ ಎಲ್ಲಾ ಶಾಂತಿಗಳನ್ನು ನಾನು ಮಾಡಿಕೊಂಡಿಲ್ಲವಲ್ಲಾ! ಏನು ಅಶಾಂತಿ ಕಾದಿದೆಯೋ? ಎಂಬ ಕೊರಗು ಬೇಡ. ಶಾಂತಿ ನಡೆಸದೆಯೂ ಶಾಂತಿಯಿಂದ ಬದುಕಬಹುದು. ನಿರ್ವಂಚನೆಯ ಧಾರ್ಮಿಕ ಜೀವನವು ಶ್ರೇಯಸ್ಸಿನ ಹೆದ್ದಾರಿ.

ಪತಿ–ಪತ್ನಿಯರೀರ್ವರನ್ನೂ ಜೊತೆಗೇ ಬದುಕುವುದಕ್ಕೆ ಅನುವು ಮಾಡಿ ಗೃಹಸ್ಥಧರ್ಮದ ಅನುಷ್ಠಾನಕ್ಕೆ ಅವಕಾಶ ಮಾಡಿಕೊಟ್ಟು ಅನುಗ್ರಹಿಸುತ್ತಿರುವ ಭಗವಂತನನ್ನು ಈ ಶಾಂತಿಕರ್ಮಗಳ ಮೂಲಕ ಆರಾಧಿಸುತ್ತಾ ನಮ್ಮ ಹಿರಿಯರುಗಳು ದೀರ್ಘಾಯುಷಿಗಳಾಗಿದ್ದರು.

* * *

# ಷಷ್ಟಿಪೂರ್ತಿ ಶಾಂತಿ

ಭಾರತಿಯ ಗೋವುಗಳ ಪರಮಾವಧಿ ಆಯುಷ್ಯ 20ವರ್ಷ. ಆನೆಗಳಿಗೆ 120ವರ್ಷ. ಆಮೆಗಳಿಗೆ 300 ವರ್ಷ. ಮನುಷ್ಯನದ್ದು 120 ವರ್ಷ.

"ಉಪನಿಷತ್ತುಗಳು ಹೇಳುವಂತೆ ಮನುಷ್ಯನ ಪೂರ್ಣಾಯುಸ್ಸು 116 ಸಂವತ್ಸರಗಳು. ಈ ಪೂರ್ಣಜೀವನವೇ ಒಂದು ಯಜ್ಞ, ಮೊದಲ 24 ವರ್ಷ ಪ್ರಾತಃ ಸವನ. ಮುಂದಿನ 44ವರ್ಷ ಮಾಧ್ಯಂದಿನ ಸವನ. ಕೊನೆಯ 48ವರ್ಷಗಳು ಸಾಯಂಸವನ. ವಸು-ರುದ್ರ-ಆದಿತ್ಯರು ಈ ತ್ರಿಷವಣದೇವತೆಗಳು. ಮರಣವೇ ಅವಭೃಥ. ಇತ್ಯಾದಿ ವಿವರ ಛಾಂದೋಗ್ಯ ದಲ್ಲಿದೆ.

60 ವರ್ಷಗಳಿಗೆ ಒಂದು ಸಂವತ್ಸರ ಚಕ್ರ ಮುಗಿಯುತ್ತದೆ. ಎರಡು ಸಂವತ್ಸರ ಚಕ್ರಗಳು (120ವರ್ಷಗಳು) ಮರ್ತ್ಯನ ಪೂರ್ಣಾಯುಸ್ಸು ಎಂಬುದು ಪುರಾಣಗಳ ಅಂಬೋಣ.

"ಯಃ ಚಿರಂ ಜೀವತಿ ಸಃ ಶತಂ ಜೀವತಿ" ಎಂದಿದ್ದಾನೆ ಪತಂಜಲಿ. ಚಿರಂಜೀವಿಯಾಗು ಎಂದು ಆಶೀರ್ವದಿಸಲ್ಪಡುವ ವ್ಯಕ್ತಿಯೂ ನೂರು ವರುಷ ಬಾಳುತ್ತಾನೆ. **'ಶತಂ ಜೀವ ಶರದೋ ವರ್ಧಮಾನಃ' 'ಶತಸಂವತ್ಸರಂ ದೀರ್ಘಮಾಯುಃ'** ಮೊದಲಾದ ವೇದಮಂತ್ರಗಳೂ ನೂರು ವರ್ಷ ಬಾಳುವಂತೆ ಆಶೀರ್ವದಿಸುತ್ತವೆ. ಇಲ್ಲಿಯ ಶತಶಬ್ದ ಪೂರ್ಣವಾಚಿ. ಕೃತ-

ತ್ರೇತ-ದ್ವಾಪರದಲ್ಲೂ ಇದೇ ವೇದ ಹೀಗೇ ಆಶೀರ್ವದಿಸಿದೆ. ಆಯಾ ಕಾಲದ ಪೂರ್ಣಾಯುಷ್ಯವನ್ನು ಶತಶಬ್ದವು ಹೇಳುತ್ತಿದೆ.

ಒಟ್ಟು ನಿಷ್ಕರ್ಷೆ ಇಷ್ಟು. ನೂರು ವರುಷ ಬಾಳಿ ಬದುಕುವುದಕ್ಕೆ ಬೇಕಾದ ಶರೀರರಚನೆ ಈ ಮಾನವ ಶರೀರದ್ದು. ನೂರು ತುಂಬಿದವ ಪೂರ್ಣಾಯುಷಿ. ಅದಕ್ಕಿಂತ ಹೆಚ್ಚು ಬದುಕಿದವ ಪುಣ್ಯಜೀವಿ. 120 ಎಂಬುದು ಮನುಜಾಯುಷ್ಯದ ಗರಿಷ್ಠಮಿತಿ. ಇದರ ಅರ್ಧಕ್ಕೆ ಸರಿಯಾಗಿ ಷಷ್ಟಿಪೂರ್ತಿ.

"ಷಷ್ಠೀ ಅಥವಾ ಷಷ್ಠ" ಎಂದರೆ ಆರನೆಯದ್ದು ಎಂದರ್ಥ. ಅಲ್ಲಿ ಮಹಾಪ್ರಾಣ ಠಕಾರವಿದೆ. **ಷಷ್ಟಿಃ** ಎಂಬ ಅಲ್ಪಪ್ರಾಣ ಟಕಾರವುಳ್ಳ ಶಬ್ದಕ್ಕೆ 60 ಎಂದರ್ಥ. ಅರವತ್ತು ಪೂರ್ತಿಯಾದಾಗ ಷಷ್ಟಿಪೂರ್ತಿ. ಷಷ್ಠಿಪೂರ್ತಿಯಲ್ಲ. ಷಷ್ಟ್ಯಬ್ಧಿ ಅಲ್ಲ, ಷಷ್ಟ್ಯಬ್ದ. ಅಬ್ಧಿ ಅಂದರೆ ಸಾಗರ. ಅಬ್ದ ಎಂದರೆ ವರುಷ. 'ಅಬ್ಧ' ಎಂಬ ಮಹಾಪ್ರಾಣ ಧಕಾರವನ್ನು ಕೆಲವರು ಬಳಸುವುದಿದೆ. ಅದೂ ಸಂಸ್ಕೃತಶಬ್ದವಲ್ಲ. ಅಲ್ಪಪ್ರಾಣ ದಕಾರವನ್ನು ಬಳಸಬೇಕು. ಷಷ್ಟ್ಯಬ್ದ ಶಾಂತಿ, ಉಗ್ರರಥಶಾಂತಿ, ಮಾರ್ಕಂಡೇಯಶಾಂತಿ ಮೊದಲಾದ ಹೆಸರುಗಳು ಷಷ್ಟಿಪೂರ್ತಿ ಶಾಂತಿಯ ಬಗೆಗೆ ಇವೆ.

## ಅರವತ್ತನೇ ಶಾಂತಿ ಯಾವಾಗ?

ಅರವತ್ತು ಆದಾಗ ಷಷ್ಟ್ಯಬ್ದಶಾಂತಿ ಎಂಬುದು ಸ್ಪಷ್ಟ. ಆದರೆ ಏಕಾಭಿಪ್ರಾಯವಿಲ್ಲ. ಅರವತ್ತು ಪ್ರಾರಂಭವಾಗುತ್ತಿದ್ದಂತೆ ಜನ್ಮಮಾಸದಲ್ಲಿ ನಡೆಸುವಂತೆ ಕೆಲವರು. 59 ಪೂರ್ತಿಯಾಗಿ 60 ಆರಂಭವಾಗುತ್ತಿರುವಾಗಲೇ (ಷಷ್ಟಿವರ್ಷಾತ್ ಪ್ರಾಕ್ ಮಧ್ಯಕಾಲೇ ವಾ) ಷಷ್ಟ್ಯಬ್ದಶಾಂತಿಯನ್ನು ಮಾಡಿ ಅರವತ್ತು ಮುಗಿದಾಗ ಷಷ್ಟಿಪೂರ್ತಿ ಉಗ್ರರಥಶಾಂತಿಯನ್ನು ನಡೆಸಬೇಕೆಂದು 'ನಿತ್ಯನೈಮಿತ್ತಿಕ ಕರ್ಮಸಂಗ್ರಹ'ದಲ್ಲಿ ಉಲ್ಲೇಖಿತವಾಗಿದೆ. ಇದರ ಪ್ರಕಾರ ಷಷ್ಟ್ಯಬ್ದಶಾಂತಿ ಬೇರೆ. ಷಷ್ಟಿಪೂರ್ತಿಶಾಂತಿ ಬೇರೆ.

ಷಷ್ಟ್ಯಬ್ದಶಾಂತಿ ಅರವತ್ತರ ಆರಂಭದಲ್ಲಿ. ಷಷ್ಟಿಪೂರ್ತಿಶಾಂತಿ ಅರವತ್ತು ತುಂಬಿದಾಗ.

ಶೌನಕಕಾರಿಕೆಯು 60 ತುಂಬಿ 61ನೇ ವರ್ಷದ ಜನ್ಮನಕ್ಷತ್ರದಂದು ಉಗ್ರರಥಶಾಂತಿಯನ್ನು ನಡೆಸುವಂತೆ ಆದೇಶಿಸಿದೆ.

**ಜನ್ಮಾಬ್ದೇ ಜನ್ಮಮಾಸೇ ಚ ಸ್ವಜನ್ಮದಿವಸೇ ತಥಾ ।**
**ಜನ್ಮರ್ಕ್ಷೇ ಚೈವ ಕರ್ತವ್ಯಾ ಶಾಂತಿರುಗ್ರರಥಾಹ್ವಯಾ ॥**
**ದೇವಾಲಯೇ ನದೀತೀರೇ ಸ್ವಗೃಹೇ ವಾ ಶುಭಸ್ಥಲೇ ।**

**(ಶಾಂತಿರತ್ನಾಕರ)**

ಇಲ್ಲಿ ಜನ್ಮಾಬ್ದೇ ಎಂದರೆ 'ಹುಟ್ಟಿದ ಸಂವತ್ಸರದಲ್ಲಿ' ಎಂದರ್ಥ. **ಜನ್ಮ ಸಂವತ್ಸರದ ಜನ್ಮಮಾಸದಲ್ಲಿ ಒದಗುವ** ಜನ್ಮತಿಥಿ ಅಥವಾ ಜನ್ಮ **ನಕ್ಷತ್ರವುಳ್ಳ ದಿನದಂದು ಉಗ್ರರಥಶಾಂತಿ** ನಡೆಸಬೇಕೆಂಬುದು ಶೌನಕ ಮತ. ಜನ್ಮಸಂವತ್ಸರದಲ್ಲಿ ಜನ್ಮಮಾಸ ಸಿಗುವುದು 60 ಭರ್ತಿಯಾಗಿ 61ನೇ ವರ್ಷ ಆರಂಭವಾದ ದಿನ. ಈ ಅರ್ಥದಲ್ಲಿ ಇದು "ಷಷ್ಟಿಪೂರ್ತಿ ಶಾಂತಿ" 60ಪೂರ್ತಿಯಾದಾಗ ನಡೆಸುವ ಶಾಂತಿ.

ಹೀಗೆ 60 ಆರಂಭವಾಗುತ್ತಿರುವಾಗ ಶಾಂತಿ ನಡೆಸಬೇಕೆಂಬ ಮಾತು ಕಂಡು ಬಂದರೂ 60 ತುಂಬಿದಾಗ ನಡೆಸಬೇಕೆಂಬ ವಿಷಯದಲ್ಲಿ ಒತ್ತು ಜಾಸ್ತಿ ಇದೆ. ಹಾಗಾಗಿಯೇ ಆರ್ಥಿಕತೆಯ ಅನುಕೂಲತೆಯುಳ್ಳ ಆಸ್ತಿಕ ಬಂಧುಗಳು 60 ಆರಂಭವಾಗುತ್ತಿರುವಾಗ ಒದಗುವ ಜನ್ಮನಕ್ಷತ್ರ ದಂದು **"ಷಷ್ಟಿತಮವರ್ಷಸೂಚಿತ ಮೃತ್ಯುದೋಷಾದಿ ಪರಿಹಾರ ಪೂರ್ವಕಂ ಆರೋಗ್ಯಯುತ ದೀರ್ಘಾಯುಷ್ಯಾವಾಪ್ತ್ಯರ್ಥಮ್"** ಎಂಬ ಸಂಕಲ್ಪ ದೊಂದಿಗೆ ನವಗ್ರಹ ಹೋಮದೊಂದಿಗೆ ತ್ರ್ಯಂಬಕಮೃತ್ಯುಂಜಯ ಹೋಮವನ್ನು ಆಚರಿಸುತ್ತಾರೆ. ಮುಂದೆ ವರ್ಷದಲ್ಲಿ ಒದಗುವ ಪ್ರತಿ ಜನ್ಮನಕ್ಷತ್ರ ಅಥವಾ ಜನ್ಮತಿಥಿಯಂದು ಬೇರೆ ಬೇರೆ ಬಗೆಯ ಧರ್ಮ ಕರ್ಮಗಳನ್ನು (ಧನ್ವಂತರಿ ಹೋಮ, ಪವಮಾನ ಹೋಮ, ನಾಮತ್ರಯ ಮಂತ್ರಹೋಮ,

ಪುಣ್ಯಕಥಾಶ್ರವಣ, ದಂಪತಿಪೂಜೆ, ಕ್ಷೇತ್ರಯಾತ್ರೆ ಮುಂತಾದವುಗಳನ್ನು) ನಡೆಯಿಸಿ 60ವರ್ಷ ತುಂಬಿ ಜನ್ಮಸಂವತ್ಸರದಲ್ಲಿ ಒದಗುವ ಜನ್ಮಮಾಸದ ಜನ್ಮನಕ್ಷತ್ರದಂದು ಉಗ್ರರಥಶಾಂತಿಯನ್ನು ಪುರೋಹಿತರ ಮಾರ್ಗದರ್ಶನದಲ್ಲಿ ನಡೆಸುತ್ತಾರೆ. 'ಅಧಿಕಸ್ಯಾಧಿಕಂ ಫಲಮ್'

## ಉಗ್ರರಥ

"ನಾವು ಬ್ರಹ್ಮರಥವನ್ನು ನೋಡಿದ್ದೇವೆ, ದೇವಸ್ಥಾನಗಳಲ್ಲಿ ಬೆಳ್ಳಿರಥ, ಸ್ವರ್ಣರಥಗಳನ್ನು ಕಂಡಿದ್ದೇವೆ. ಈ ಉಗ್ರರಥ, ಭೀಮರಥ, ವಿಜಯರಥ. ಇವೆಲ್ಲಾ ಯಾವ ರಥ?"

"ಇವೆಲ್ಲ ದೇವರ ಹೆಸರು." ಮೃತ್ಯುಂಜಯ, ತ್ರ್ಯಂಬಕ, ಅಘೋರ ಎಂದಿದ್ದಂತೆ ಮನುಷ್ಯನ ಅರವತ್ತು, ಎಪ್ಪತ್ತು ಮೊದಲಾದ ವರ್ಷಘಟ್ಟಗಳ ನಿಯಾಮಕವಾದ ಮೃತ್ಯುದೇವತೆಯೆನಿಸಿದ ರುದ್ರನ ರೂಪಗಳಿವೆ.

**ಜನ್ಮತೋ ಷಷ್ಟಿಮೇ ವರ್ಷೇ ಮೃತ್ಯುರುಗ್ರರಥೋ ನೃಣಾಮ್ ।**
**ದಶಭಿಸ್ತ್ವಧಿಕೇ ತಸ್ಮಿನ್ ಮೃತ್ಯುರ್ಭೀಮರಥೋ ನೃಣಾಮ್ ॥**
**ವಿಜಯಾಖ್ಯರಥೋ ಮೃತ್ಯುರಷ್ಟಾಸಪ್ತತಿಮೇ ಭವೇತ್ ।**
**ಷಣ್ಮಾಸಾನ್ಮೃತ್ಯುಮಭ್ಯೇತಿ ಧನಹಾನಿಶ್ಚ ಜಾಯತೇ ।**
**ತದ್ದೋಷಶಮನಾರ್ಥಾಯ ಶಾಂತಿಂ ಕುರ್ಯಾದ್ವಿಚಕ್ಷಣಃ ॥**

**(ಶಾಂತಿರತ್ನಾಕರ)**

ಜನಿಸಿದ ವ್ಯಕ್ತಿಗೆ ಅರವತ್ತು ತುಂಬಿದಾಗ ಎದುರುಗೊಳ್ಳುವ ಮೃತ್ಯುದೇವತೆ ಉಗ್ರರಥ. ಎಪ್ಪತ್ತಕ್ಕೆ ಭೀಮರಥ. ಎಪ್ಪತ್ತೆಂಟಕ್ಕೆ ವಿಜಯರಥ. ಈ ಕಾಲನಿಯಾಮಕ ಮೃತ್ಯುದೇವತೆಯನ್ನು ಅನುಗ್ರಹೋನ್ಮುಖನನ್ನಾಗಿಸುವುದು ಮನುಜನ ಕರ್ತವ್ಯ. ಕಾಲಸಂಧಿಯಲ್ಲಿ ಸೂಚಿತವಾಗುವ ದೋಷದ ಶಮನವೂ ಶಾಂತಿಕರ್ಮದಿಂದ ಸಾಧ್ಯ. ಹಾಗಾಗಿ 60, 70, 78ನೇ ವರ್ಷಗಳಲ್ಲಿ ಕ್ರಮವಾಗಿ ಉಗ್ರರಥಶಾಂತಿ, ಭೀಮರಥಶಾಂತಿ ಹಾಗೂ ವಿಜಯರಥಶಾಂತಿಗಳನ್ನು ವಿಚಕ್ಷಣನಾದ ವ್ಯಕ್ತಿ ಅವಶ್ಯ ನಡೆಸಬೇಕು.

ಈ ಶರೀರವೇ ಒಂದು ರಥ. ಶಾರೀರಾತ್ಮನೇ ಇಲ್ಲಿಯ ರಥಿಕ. **'ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವ ಚ'** ಬುದ್ಧಿಯ ಸಾರಥ್ಯದಲ್ಲಿ ಮನಸ್ಸೆಂಬ ಕಡಿವಾಣವನ್ನು ಜಗ್ಗಿ ಇಂದ್ರಿಯ ಕುದುರೆಗಳನ್ನು ಪರತತ್ವದ ಕಡೆಗೆ ದೌಡಾಯಿಸಬೇಕು. ಈ ದೇಹರಥದ ಶಕ್ತಿ ಅರವತ್ತು ವಯಸ್ಸಿನ ನಂತರ ಕಡಿಮೆಯಾಗತೊಡಗುತ್ತದೆ. ಉಗ್ರರಥ, ಭೀಮರಥ ಎಂಬ ಶಬ್ದಗಳು ಇದನ್ನೇ ಸಂಕೇತಿಸುತ್ತಿವೆ. 78ರ ತನಕವೂ ಈ ಶರೀರದಲ್ಲಿ ಸಾಧನೆ ಮಾಡಿದವ ನಿಜವಾಗಿಯೂ ವಿಜಯಿ. ಆಗ ವಿಜಯರಥ.

ಶರೀರಶಕ್ತಿ ಕುಂಠಿತವಾಗುತ್ತಿದ್ದಂತೆ ಆತ್ಮಶಕ್ತಿಯನ್ನು ವೃದ್ಧಿಸಿಕೊಳ್ಳಬೇಕು. ತಾನು ಸಂಪಾದಿಸಿದ ದ್ರವ್ಯಗಳನ್ನು ಸತ್ಕರ್ಮದಲ್ಲಿ ವಿನಿಯೋಗಿಸಿ ಪುಣ್ಯವನ್ನಾಗಿ ಪರಿವರ್ತಿಸಿಕೊಳ್ಳಬೇಕು. ಷಷ್ಟಿಪೂರ್ತಿ ಶಾಂತಿ ಮುಂತಾದ ಪ್ರಕ್ರಿಯೆಯಲ್ಲಿ ಹತ್ತು ಹಲವು ಸತ್ಕರ್ಮಾನುಷ್ಠಾನಗಳಿಗೆ ಅವಕಾಶವಿದೆ.

## ಷಷ್ಟಿಪೂರ್ತಿಶಾಂತಿ ವಿಧಿ–ವಿಧಾನ

ಷಷ್ಟಿಪೂರ್ತಿ ಶಾಂತಿಯು ಎರಡು ದಿನದ ಪ್ರಕ್ರಿಯೆ. ಮೊದಲ ದಿನ ಕಲಶಪ್ರತಿಷ್ಠಾಪನೆ. ಮರುದಿನ ಹೋಮ–ದಾನಗಳು.

ಶಾಂತಿಯ ಪೂರ್ವದಿನದಂದು ದಂಪತಿಗಳು ಪ್ರಾತಃಕಾಲದೊಳೆದ್ದು ಚಿರಂಜೀವೀಸ್ಮರಣೆಯೊಂದಿಗೆ ಮಂಗಲಸ್ನಾನವನ್ನು ಮಾಡುತ್ತಾರೆ. ನಿತ್ಯಾನುಷ್ಠಾನಗಳ್ನು ಪೂರೈಸಿ ಷಟ್ಪುಚ್ಛಕಚ್ಛಧರಿಸಿ ಅಲಂಕೃತರಾಗುತ್ತಾರೆ. ವಿಪ್ರರ ಮೂಲಕ ಪುಣ್ಯಾಹವಾಚನವನ್ನು ಮಾಡಿಸುತ್ತಾರೆ. ನಾಂದೀ ಸಮಾರಾಧನೆ ನಡೆಯುತ್ತದೆ. ಈಗ ಕೃಚ್ಛ್ರಾಚರಣೆ ನಡೆಯುತ್ತದೆ.

### ಕೃಚ್ಛ್ರಾಚರಣೆ :

ಈ ಎರಡು ದಿನಗಳಲ್ಲಿ ನಡೆಯಲಿರುವ ಸಕಲವಿಧಿ–ವಿಧಾನಗಳನ್ನು ನಡೆಸುವುದಕ್ಕೆ ಅಧಿಕಾರಸಿದ್ಧಿಗಾಗಿ ಅರ್ಥಾತ್ ಅರ್ಹತಾಸಂಪಾದನೆಗಾಗಿ ಈ ಕೃಚ್ಛ್ರಾಚರಣೆ. ಕೃಚ್ಛ್ರವೆಂಬುದು ಒಂದು ಪ್ರಾಯಶ್ಚಿತ್ತ ಕರ್ಮ.

ಬಹುಕ್ಲಿಷ್ಟವಾದ ವ್ರತ. ಎರಡು ತೆರನಾದ ಕೃಚ್ಛ್ರಗಳಿವೆ. ಒಂದು ಪ್ರಾಜಾಪತ್ಯ. ಮತ್ತೊಂದು ಕೃಚ್ಛ್ರಸಾಂತಪನ. ಇದರಲ್ಲಿ ಪ್ರಾಜಾಪತ್ಯವನ್ನು ಇಂದಿನ ಮಂದಿ ಮಾಡುವುದು ಅಸಾಧ್ಯ. ಇದು ಹನ್ನೆರಡು ದಿನಗಳಲ್ಲಿ ನಡೆಯುವ ಉಪವಾಸಭೂಯಿಷ್ಠವ್ರತ. ಮೂರು ದಿನಗಳಲ್ಲಿ ನಡೆಯುವ ಉಪವಾಸ ವ್ರತವನ್ನು ಪಾದಕೃಚ್ಛ್ರವೆನ್ನಲಾಗಿದೆ. ಕೃಚ್ಛ್ರಸಾಂತಪನವು ಎರಡು ದಿನದ ವ್ರತ. ಮೊದಲ ದಿನ ಒಂದು ಲೋಟದಷ್ಟು ಪಂಚಗವ್ಯವನ್ನು ಮಾತ್ರ ಕುಡಿದು ಉಪವಾಸವಿರುವುದು. ಮರುದಿನ ಪೂರ್ತಿ ಉಪವಾಸ ವಿರುವುದು.

ಶಾಂತಿಕರ್ಮಾಧಿಕಾರಸಿದ್ಧಿಗಾಗಿ ದಂಪತಿಗಳು ಈ ಕೃಚ್ಛ್ರವನ್ನು ಆಚರಿಸಬೇಕು. ಇಂದು ಸಾಕ್ಷಾತ್ ಕೃಚ್ಛ್ರಾಚರಣೆಯ ಕ್ರಮವಿಲ್ಲ. ಪೌರೋಹಿತ್ಯ ಗ್ರಂಥಗಳು ಕೃಚ್ಛ್ರಪ್ರತಿನಿಧಿಯನ್ನೂ ಹೇಳಿವೆ. ಸಾಲಂಕೃತ ಗೋದಾನವು ಕೃಚ್ಛ್ರಪ್ರತಿನಿಧಿ. ಗೋವಿನ ಮೂಲ್ಯವನ್ನು ವಿಪ್ರನಿಗೆ ಕೊಟ್ಟು ಅಧಿಕಾರಸಂಪದಸ್ತು ಎಂದು ಹೇಳಿಸುವುದೂ ಕೃಚ್ಛ್ರಪ್ರತಿನಿಧಿ.

ಯಜಮಾನ ದಂಪತಿಗಳು ಒಂದಿಷ್ಟು ಬಂಗಾರದ ನಾಣ್ಯಗಳನ್ನೋ ದಕ್ಷಿಣೆಯನ್ನೋ ಕೈಯಲ್ಲಿ ಹಿಡಿದುಕೊಂಡು ವಿಪ್ರರಿಗೆ ಮೂರು ಪ್ರದಕ್ಷಿಣೆ ಬರುತ್ತಾರೆ. ವಿಪ್ರರ ಮುಂದೆ ನಿಂತು ಯಜಮಾನ ಹೇಳುತ್ತಾನೆ "ಅಪಾರ ಸಂಸಾರಸಮುದ್ರಸೇತವಃ" ವಿಪ್ರಪರಿಷತ್ತಿಗೆ ನಮ್ಮ ವಿನಮ್ರ ನಮಸ್ಕಾರ. "ಓ ವಿಪ್ರೋತ್ತಮರೇ, ನನಗೆ ಅರವತ್ತು ತುಂಬಿದೆ. ಸಂವತ್ಸರ ಚಕ್ರದ ಈ ಸಂಧಿಯಲ್ಲಿ ಸೂಚಿತವಾಗುವ ಅರಿಷ್ಟಗಳು ಗಂಡೋತ್ಪಾತಗಳು ಹಲವಿರಬಹುದು. ಮಾತಾಪಿತೃಮೃತಿಯು ಸೂಚಿತವಾಗಿರಬಹುದು. ಭಾರ್ಯಾಪುತ್ರವಿಯೊ ೇಗವಿರಬಹುದು. ವಿವಿಧರೋಗವಿಕಾರಗಳಿರ ಬಹುದು. ದೃಷ್ಟಿ ಶ್ರೋತ್ರಾದಿ ಇಂದ್ರಿಯಗಳ ವೈಕ್ಲವ್ಯವು ಸೂಚಿತವಾಗಿರ ಬಹುದು. ನಿತ್ಯದರ್ಶನೀಯಗಳಾದ ಧ್ರುವ, ಅರುಂಧತೀ ಮೊದಲಾದ ನಕ್ಷತ್ರಗಳು ಸ್ಫುಟವಾಗಿ ಕಾಣದಿರುವಿಕೆ, ಹಾಗು ದುಸ್ವಪ್ನದ ಕಾಣುವಿಕೆ ಯಿಂದ ಸೂಚಿತವಾದ ಅಪಮೃತ್ಯ್ವಾದಿ ಆಗಿರಬಹುದು. ಈ ಎಲ್ಲಾ ಅರಿಷ್ಟಗಳ ಪರಿಹಾರದೊಂದಿಗೆ ಆರೋಗ್ಯಯುಕ್ತ ಶರೀರದಿಂದ ದೀರ್ಘ ಕಾಲ ಬಾಳಿ ಸಾಧನೆ ನಡೆಸುವುದಕ್ಕಾಗಿ ಆಯುಷ್ಯವೃದ್ಧಿಗಾಗಿ

ಮಾರ್ಕಂಡೇಯ ಹೋಮವೆಂಬ ಷಷ್ಟ್ಯಬ್ದಶಾಂತಿಯನ್ನು ಅದರ ಅಂಗವಾಗಿ ಜಪ ದಾನಾದಿಗಳನ್ನು ನಡೆಸಲು ನನಗೆ ಯೋಗ್ಯತಾ ಸಿದ್ದಿಯಾಗಿದೆ ಎಂದು ತಾವೆಲ್ಲರೂ ಹೇಳಿ ಅನುಗ್ರಹಿಸಬೇಕು. ವಿಪ್ರರು ಭಗವಂತನ ಚಲಪ್ರತಿಮೆ, ಸರ್ವದೇವಮಯರು. ವೇದಮೂರ್ತಿಗಳು. ತಮ್ಮ ಮಾತು ವೇದವಾಕ್ಯ ಅದೇ ದೇವವಾಕ್ಯ. ಕೃಚ್ಛ್ರತ್ರಯ ಪ್ರತ್ಯಾಮ್ನಾಯವಾಗಿ ಅರ್ಪಿಸುತ್ತಿರುವ ಈ ಅಲ್ಪ ದಕ್ಷಿಣೆಯನ್ನು ಯಥೋಕ್ತ ದಕ್ಷಿಣೆಯೆಂಬ ದೊಡ್ಡಮನಸ್ಸಿನಿಂದ ಸ್ವೀಕರಿಸಿ ಅಧಿಕಾರಸಂಪತ್ತನ್ನಿತ್ತು ಹರಸಬೇಕು" ಎಂದು ವಿನಮ್ರವಾಗಿ ಹೇಳಿ ಸುವರ್ಣನಾಣ್ಯಗಳನ್ನು ದರ್ಭಾಕ್ಷತೆಗಳೊಂದಿಗೆ ವಿಪ್ರರ ಮುಂದಿಟ್ಟು ಅವರಿಗೆ ಹಂಚಿಕೊಟ್ಟು ಸಪತ್ನೀಕನಾಗಿ ನಮಿಸುತ್ತಾನೆ.

ವಿಪ್ರರು 'ಆಯುರಭಿವೃದ್ಧ್ಯರ್ಥಂ ಷಷ್ಟ್ಯಬ್ದಶಾಂತಿಕರ್ಮಣಿ ತವ ಯೋಗ್ಯತಾ ಸಿದ್ಧಿರಸ್ತು' ಎಂದು ಹೇಳುತ್ತಾರೆ. ಯಜಮಾನ 'ಅನುಗೃಹೀತೋಸ್ಮಿ' ಎನ್ನುತ್ತಾ ಮತ್ತೊಮ್ಮೆ ಸಾಷ್ಟಾಂಗ ನಮಿಸುತ್ತಾನೆ. "ಅದೆಷ್ಟು ದೇವತೆಗಳಿರುವರೋ ಅವರೆಲ್ಲಾ ವೇದವೇತ್ತನಾದ ಬ್ರಾಹ್ಮಣನಲ್ಲಿ ನೆಲೆಸಿದ್ದಾರೆ. ಅಂತಹ ವಿಪ್ರರಿಗೆ ದಿನದಿನವೂ ನಮಿಸುತ್ತೇನೆ. ಈ ವಿಪ್ರರು ಕೆಟ್ಟಮಾತು ಆಡರು. ಇವರು ಪ್ರೀತರಾದರೆ ದೇವತೆಗಳೆಲ್ಲಾ ಸಂತೃಪ್ತರು" ಎಂಬ ಅರ್ಥದ 'ಯಾವತೀರ್ವೈ ದೇವತಾಸ್ತಾ ಸರ್ವಾ ವೇದವಿದಿ ಬ್ರಾಹ್ಮಣೇ ವಸಂತಿ' ಎಂಬ ಮಂತ್ರವನ್ನು ಹೇಳುತ್ತಾನೆ.

## ಕಲಶ ಪ್ರತಿಷ್ಠೆ

ಕೃಚ್ಛ್ರಾಚರಣೆಯಾದ ನಂತರ ಋತ್ವಿಗ್‌ವರಣೆಯೊಂದಿಗೆ ನವಗ್ರಹ ಹೋಮ. ಗಣಹೋಮಗಳನ್ನು ಮಾಡುವುದಿದೆ. ಸಾಯಂ ಸಂಧ್ಯಾನಂತರ ಕಲಶಪ್ರತಿಷ್ಠೆ ನಡೆಯುತ್ತದೆ. ಕೆಲವೊಮ್ಮೆ ಪ್ರಾತಃಕಾಲದಲ್ಲೆ ಕಲಶಪ್ರತಿಷ್ಠೆ ಮಾಡುವುದು ಇದೆ. ಎರಡು ದಿನದ ಕಾರ್ಯಕ್ರಮ ನಡೆಸುವಲ್ಲಿ ಅನಾನುಕೂಲವಿದ್ದವರು ಒಂದೇ ದಿನ ಪ್ರಾತಃ ಕಲಶಪ್ರತಿಷ್ಠೆಯೊಡನೆ ಶಾಂತಿಕರ್ಮವನ್ನು ಲಗುಬಗೆಯಲ್ಲಿ ನಡೆಸುವುದೂ ಇದೆ. ಕಲಶ

ಪ್ರತಿಷ್ಠೆಗಾಗಿ ಸರ್ವತೋಭದ್ರ ಅಥವಾ ಭದ್ರಕಮಂಡಲವನ್ನು ಪಂಚವರ್ಣದ ರಂಗೋಲಿಗಳಿಂದ ಉದ್ಧರಿಸಲಾಗುತ್ತದೆ. ಈ ಸುಂದರ ಮಂಡಲದಲ್ಲಿ ಬ್ರಹ್ಮಾದಿ ಮಂಡಲದೇವತೆಗಳನ್ನು ಪೂಜಿಸಿ ಮಂಡಲದ ಮೇಲೆ ಧಾನ್ಯದಲ್ಲಿ ಕಲಶಗಳನ್ನು ಸ್ಥಾಪಿಸಲಾಗುತ್ತದೆ.

**ಕಲಶ ಸಂಖ್ಯೆ :** ಷಷ್ಟಿಪೂರ್ತಿಯಲ್ಲಿ ಎಷ್ಟು ಕಲಶ? ಅರವತ್ತು ಎನ್ನುವುದು ಉಚಿತ. ಅರವತ್ತು ಸಂವತ್ಸರಗಳ ಅಭಿಮಾನಿ ದೇವತೆಗಳನ್ನು ಆವಾಹಿಸುವುದಕ್ಕೆ 60 ಕಲಶ ಇದ್ದರೆ ಚೆನ್ನ. ಅರವತ್ತರೊಂದಿಗೆ ಇನ್ನೂ ಹದಿನೇಳು ಪ್ರಧಾನ ದೇವತಾ ಕಲಶಗಳನ್ನು ಪ್ರತ್ಯೇಕವಾಗಿಟ್ಟು 77 ಕಲಶಗಳನ್ನು ಸ್ಥಾಪಿಸಬಹುದು. ಕಲಶಗಳನ್ನಿಟ್ಟ ಮೇಲೆ ಅವಕ್ಕೆ ಜೋಡಿ ವಸ್ತ್ರ, ಸುವರ್ಣಪ್ರತಿಮೆ(ನಾಣ್ಯ)ಗಳನ್ನು ನೀಡುವುದು ಅಷ್ಟೇ ಮುಖ್ಯ. ಅರ್ಚಿತಕಲಶಗಳನ್ನು ಕರ್ಮಾಂತ್ಯದಲ್ಲಿ ಯೋಗ್ಯರಿಗೆ ತಾಂಬೂಲ ದಕ್ಷಿಣೆಗಳೊಡನೆ ದಾನವೀಯುವುದೂ ಅಷ್ಟೇ ಮುಖ್ಯ. ಅಷ್ಟು ವಿಪ್ರರನ್ನು ಕರೆಸಿ ದಾನವೀಯುವುದಕ್ಕೆ ಅನುಕೂಲತೆಯುಳ್ಳವರು ಮಾತ್ರ ಅರವತ್ತು ಕಲಶಗಳನ್ನಿಡಬಹುದು. ಇಲ್ಲವಾದರೆ 36, 25, 17, 5 ಮೊದಲಾದ ಸಂಖ್ಯೆಗಳಲ್ಲಿ ಒಂದನ್ನು ಆರಿಸಿಕೊಳ್ಳಬಹುದು. ಅರವತ್ತರಿಂದ ಐದರ ತನಕ ಸಾಮರ್ಥ್ಯಕ್ಕನುಗುಣವಾಗಿ ಕಲಶ ಸಂಖ್ಯೆಯನ್ನು ನಿರ್ಧರಿಸಬಹುದು. ಸಾಮಾನ್ಯವಾಗಿ ಹದಿನೇಳು ಕಲಶಗಳನ್ನು ಸ್ಥಾಪಿಸುವ ವಾಡಿಕೆಯಿದೆ.

ಹದಿನೇಳು ಕಲಶಗಳಲ್ಲಿ ಆವಾಹಿತರಾಗುವ ದೇವತೆಗಳಿಂದಾಗಿ ಆ ಕಲಶಗಳಿಗೆ ಪ್ರತ್ಯೇಕ ಹೆಸರಿದೆ. 1. ಉಗ್ರರಥ ಕಲಶ, 2. ಉಗ್ರ ಕಲಶ, 3. ತ್ರ್ಯಂಬಕ ಕಲಶ, 4. ಮಾರ್ಕಂಡೇಯ ಕಲಶ, 5. ಮೃತ್ಯು ಕಲಶ, 6. ಯಮ ಕಲಶ, 7. ಷಷ್ಠೀದೇವಿ ಕಲಶ, 8. ಚಿರಜೀವಿ ಕಲಶ, 9. ಜನ್ಮನಕ್ಷತ್ರ ದೇವತಾ ಕಲಶ, 10. ಆಯುರ್ದೇವತಾ ಕಲಶ, 11. ಧ್ರುವ ಕಲಶ, 12. ವರುಣ ಕಲಶ, 13. ನವಗ್ರಹ ಕಲಶ, 14. ಗ್ರಹಾಧಿದೇವತಾ ಕಲಶ, 15. ಗ್ರಹಪ್ರತ್ಯಧಿದೇವತಾ ಕಲಶ, 16. ಪರಿವಾರ ದೇವತಾ ಕಲಶ, 17. ದಿಕ್ಪಾಲದೇವತಾ ಕಲಶ.

ಅರವತ್ತು ಕಲಶಗಳನ್ನಿಟ್ಟಾಗಲೂ ಈ ದೇವತೆಗಳನ್ನೇ ಆವಾಹಿಸುವುದು. ಅಲ್ಲಿ ಎಂಟನೇಯ ಚಿರಜೀವಿ ಕಲಶದ ಜಾಗದಲ್ಲಿ ಪ್ರತ್ಯೇಕವಾಗಿ ಏಳು ಕಲಶಗಳನ್ನು ಇಡಲಾಗುತ್ತದೆ. ಅಶ್ವತ್ಥಾಮ ಕಲಶ, ಬಲಿ ಕಲಶ ಎಂದು ಪ್ರತ್ಯೇಕವಾಗಿ ಹೆಸರಿಸಲಾಗುತ್ತದೆ. ಹದಿಮೂರನೆಯ ನವಗ್ರಹಗಳಿಗೆ ಒಂಭತ್ತು ಕಲಶ, ಅಧಿದೇವತೆಗಳಿಗೆ ಒಂಭತ್ತು, ಪ್ರತ್ಯಧಿ ದೇವತೆಗಳಿಗೂ ಒಂಭತ್ತು, ದುರ್ಗಾ, ಗಣಪತಿ, ಕ್ಷೇತ್ರಪಾಲ, ವಾಸ್ತೋಷ್ಪತಿ, ತ್ರ್ಯಂಬಕ, ಅಭಯಂಕರೇಂದ್ರ, ಇಂದಿರಾ ಎಂಬ ಪರಿವಾರ ದೇವತೆಗಳಿಗೆ ಏಳು ಹಾಗು ಅಷ್ಟದಿಕ್ಪಾಲಕರಿಗೆ ಎಂಟು ಕಲಶಗಳನ್ನಿಟ್ಟಾಗ ಅರವತ್ತು ಕಲಶಗಳಾಗುತ್ತವೆ.

ಈ ಕಲಶಗಳಲ್ಲಿ ಆಯಾ ಪ್ರಧಾನ ದೇವತೆಗಳನ್ನಲ್ಲದೇ ಅರವತ್ತು ಸಂವತ್ಸರಾಧಿಪತಿಗಳು, ಮೇಷಾದಿ ದ್ವಾದಶರಾಶ್ಯಧಿಪತಿಗಳು, ವಸಂತಾದಿ ಋತುಗಳ ಆರು ಅಧಿಪತಿಗಳು, ಉತ್ತರಾಯಣ, ದಕ್ಷಿಣಾಯನ ದೇವತೆಗಳು, ಅಭಿಜಿತ್ ಸೇರಿಸಿ 28 ನಕ್ಷತ್ರಾಧಿಪತಿಗಳು, 27 ಯೋಗಾಧಿಪತಿಗಳು, 16 ತಿಥ್ಯಧಿಪತಿಗಳು, ಸಪ್ತವಾಸರ ದೇವತೆಗಳು, ಹನ್ನೊಂದು ಕರಣಾಧಿಪತಿಗಳು ಇವರನ್ನೆಲ್ಲಾ ಪ್ರತ್ಯೇಕವಾಗಿ ಹೆಸರನ್ನು ಉಲ್ಲೇಖಿಸಿ ಆವಾಹಿಸಲಾಗುತ್ತದೆ.

ಕಲಶಗಳು ಇಂತಹ ಲೋಹದ್ದೇ ಎಂಬ ಆದೇಶವಿಲ್ಲ. ಬಂಗಾರ, ಬೆಳ್ಳಿ, ತಾಮ್ರಗಳು ಶ್ರೇಷ್ಠ. ಅಸಾಮರ್ಥ್ಯದ ಸ್ಥಿತಿಯಲ್ಲಿ ಮಣ್ಣಿನ ಕಲಶವೂ ಆಗಬಹುದು. ಒಂದು ಪ್ರಸ್ಥದಷ್ಟು(ಸುಮಾರು ಒಂದು ಲೀಟರ್) ನೀರು ಹಿಡಿಯುವಷ್ಟಾದರೂ ಕಲಶದ ಪರಿಮಾಣವಿರಬೇಕು. ಪ್ರಧಾನಕಲಶವೊಂದು ಇದರ ನಾಲ್ಕರಷ್ಟಿರುವುದು ಉಚಿತ. ಕಲಶದಲ್ಲಿ ಸುವರ್ಣಪ್ರತಿಮೆ ಗಳನ್ನಿಡುವುದಕ್ಕೆ ಬಹಳ ಮಹತ್ವವಿದೆ. ಅಸಾಧ್ಯವಾದಾಗ ತುಲಸೀದಳವು ಸಾಕು. ಸುವರ್ಣನಾಣ್ಯವನ್ನು ಕಲಶದಲ್ಲಿಡುವುದಾದರೆ ಮೊದಲು ಆ ನಾಣ್ಯಗಳಿಗೆ (ಪ್ರತಿಮೆಗಳಿಗೆ) "ಅಗ್ನ್ಯುತ್ತಾರಣೆ" ಎಂಬ ವಿಧಿಯನ್ನು ಅವಶ್ಯ ನಡೆಸಬೇಕು. 'ಅಗ್ನಿಸಪ್ತಿಂ' ಎಂಬ ಸೂಕ್ತದಿಂದ ವಿಧ್ಯುಕ್ತಕ್ರಮದಿಂದ ಅಭಿಷೇಕ ಮಾಡುವ ಈ ಅಗ್ನ್ಯುತ್ತಾರಣದಿಂದ ಲೋಹದೋಷಗಳು ಹೋಗಿ ಅದಕ್ಕೆ ಪೂಜಾರ್ಹತೆ ಪ್ರಾಪ್ತಿಯಾಗುತ್ತದೆ. ಟಂಕಸಾಲೆಯಲ್ಲಿ ನಡೆದ

ಟಂಕನ, ಅವಘಾತ, ಕುದ್ದಾಲಾಗ್ನಿಸ್ಪರ್ಶ ಮುಂತಾದ ತಾಪದೋಷ ಗಳು ಪರಿಹೃತವಾಗುತ್ತದೆ.

ಕಲಶಗಳನ್ನು ಧಾನ್ಯದ ಮೇಲಿಟ್ಟು ಶುದ್ಧೋದಕವನ್ನು ತುಂಬಿಸಿ ಔಶೀರ(ಲಾವಂಚ), ಪಂಚರತ್ನ ಮೊದಲಾದ ವಿಹಿತ ದ್ರವ್ಯಗಳನ್ನೆಲ್ಲಾ ಕಲಶ ಜಲದಲ್ಲಿ ಹಾಕಿ ಪಂಚಪಲ್ಲವ, ಪೂರ್ಣಪಾತ್ರ, ಫಲಗಳನ್ನಿಟ್ಟು, ಕಲಶದಲ್ಲಿ ಆಯಾ ದೇವತೆಗಳನ್ನು ಆವಾಹಿಸಿ, ಪ್ರಾಣಪ್ರತಿಷ್ಠೆ ಮಾಡಿ, ಅರ್ಚಿಸಿ, ಪೂಜಿಸಬೇಕು. ಋಗ್ವೇದಾದಿ ಪಾರಾಯಣವನ್ನು ನಡೆಸಬೇಕು. ಅಷ್ಟಾವಧಾನಾದಿ ಸೇವೆಗಳನ್ನು ನಡೆಸಬಹುದು.

ಕಲಶಪೂಜೆ ಮುಗಿಸಿ ರಾತ್ರಿಭೋಜನದೊಂದಿಗೆ ಅಂದಿನ ಕೆಲಸವನ್ನು ಕೃಷ್ಣಾರ್ಪಣವೆನ್ನಬೇಕು.

**ಎರಡನೇ ದಿನದ ವಿಧಿ** :

ಇಂದು ಷಷ್ಟಿಪೂರ್ತಿಶಾಂತಿಯ ಮುಖ್ಯದಿನ. ಯಜಮಾನ ದಂಪತಿಗಳು ಅರುಣೋದಯ ಕಾಲದೊಳೆದ್ದು ಸೂರ್ಯೋದಯಕ್ಕೆ ಮುಂಚಿತವಾಗಿಯೇ ತಮ್ಮ ನಿತ್ಯಾನುಷ್ಠಾನಗಳನ್ನು ಮುಗಿಸಿಕೊಳ್ಳುತ್ತಾರೆ. ಹವನ, ಸ್ನಾನ, ದಾನಗಳೆಂಬ ವಿಸ್ತೃತ ವಿಧಿಗಳು ಇಂದು ನಡೆಯಬೇಕಿ ರುವುದರಿಂದ ಬೆಳಗಾಗುತ್ತಿರುವಂತೆಯೇ ಪುಣ್ಯಾಹಾದಿಕರ್ಮ ಆರಂಭ ವಾಗಬೇಕು. ಅದಕ್ಕಾಗಿ ನಿತ್ಯಕರ್ಮಗಳಲ್ಲಿ 'ಯಾವತ್ಸಂಕೋಚಸಂಭವಃ' ಎಂಬ ನ್ಯಾಯವನ್ನು ಅನುಸರಿಸಬೇಕು. ಭಾಗವತ ಸಪ್ತಾಹ, ಅಷ್ಟಕಹೋಮ ಮುಂತಾದ ಏಳೆಂಟು ಘಂಟೆಗಳಷ್ಟು ವಿಸ್ತೃತ ಕಾಲದಲ್ಲಿ ನಡೆಯುವ ಕರ್ಮಗಳಲ್ಲಿ ನಿತ್ಯಕರ್ಮಗಳಿಗೆ ಸಂಕ್ಷೇಪವನ್ನು ಧರ್ಮಶಾಸ್ತ್ರ ಆದೇಶಿಸಿದೆ. ಇದು ಪದ್ಮಪುರಾಣದ ಮಾತು

**ಅರುಣೋದಯೇಽಸೌ ನಿರ್ವರ್ತ್ಯ**
**ಶೌಚಂ ಸ್ನಾನಂ ಸಮಾಚರೇತ್ ।**
**ನಿತ್ಯಂ ಸಂಕ್ಷೇಪತಃ ಕೃತ್ವಾ**
**ಸಂಧ್ಯಾದ್ಯಂ ಸ್ವಂ ಪ್ರಯತ್ನತಃ ॥**

ಅರುಣೋದಯದಲ್ಲಿ ಸ್ನಾನ ಮುಗಿಸಿ ಸಂಧ್ಯೆ ಮೊದಲಾದ ನಿತ್ಯಕರ್ಮಗಳನ್ನು ಪ್ರಯತ್ನಪೂರ್ವಕ ಸಂಕೋಚಗೊಳಿಸಿ ಅತಿಶೀಘ್ರದಲ್ಲಿ ಶಾಂತಿಕರ್ಮದಲ್ಲಿ ಭಾಗವಹಿಸುವುದಕ್ಕೆ ಸಿದ್ಧನಾಗಬೇಕು. ಷಷ್ಟಿಪೂರ್ತಿಗೂ ಇದು ಅನ್ವಯಿಸುತ್ತದೆ. ಋತ್ವಿಜರಿಗೂ ಈ ಮಾತನ್ನು ಅನ್ವಯಿಸಬೇಕು.

ಪುಣ್ಯಾಹ-ಋತ್ವಿಗ್ವರಣೆಗಳ ನಂತರ ಮಾರ್ಕಂಡೇಯ ಹೋಮ ಅಥವಾ ಉಗ್ರರಥ ಶಾಂತಿಹೋಮ ಇಂದು ನಡೆಯುತ್ತದೆ. ಹಿಂದೆ ಕಲಶಗಳಲ್ಲಿ ಆವಾಹಿಸಿರುವ ಎಲ್ಲಾ ದೇವತೆಗಳಿಗೂ ಇಲ್ಲಿ ಆಹುತಿಯಿದೆ. ನವಗ್ರಹ, ಚಿರಜೀವಿ, ಸಂವತ್ಸರ, ಮಾಸ ಮೊದಲಾದ ಕಾಲಾಭಿಮಾನಿಗಳು ಇವರೆಲ್ಲರಿಗೂ ಆಹುತಿಯನ್ನು ನೀಡುವ ವಿಸ್ತೃತ ಪ್ರಕ್ರಿಯೆ ಈ ಹೋಮದಲ್ಲಿದೆ. ಈ ಹೋಮದೊಂದಿಗೆ ಪ್ರತ್ಯೇಕವಾಗಿ ಧನ್ವಂತರಿ, ಪವಮಾನ, ಮೃತ್ಯಂಜಯ ಹೋಮಾದಿಗಳನ್ನೂ ನಡೆಸಬಹುದು. ಪೂರ್ಣಾಹುತಿಯೊಂದಿಗೆ ಹೋಮವು ಪ್ರಾತಃಕಾಲದಲ್ಲಿಯೇ ಮುಗಿಯುತ್ತದೆ. ಹೋಮ ನಡೆಯುತ್ತಿದ್ದಂತೆಯೇ ಕಲಶಗಳಲ್ಲಿ ಜಪ-ಪಾರಾಯಣಗಳೊಂದಿಗೆ ಅಭಿಮಂತ್ರಿಸಲಾಗುತ್ತದೆ.

ಇನ್ನೊಂದೆಡೆ ಮೃತ್ಯುಂಜಯನನ್ನು ಪಂಚ ಅಥವಾ ಸಪ್ತರೂಪಗಳಲ್ಲಿ ಆರಾಧಿಸಲಾಗುತ್ತದೆ. ಪಂಚಾಕ್ಷರ ಪ್ರತಿಪಾದ್ಯನಾದ ರುದ್ರನು ಪಂಚರೂಪಿ. ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ ಹಾಗೂ ಈಶಾನ ಎಂಬ ಪಂಚರೂಪಗಳೊಡನೆ ತ್ರ್ಯಂಬಕ, ಮೃತ್ಯುಂಜಯ ಎಂಬ ಎರಡು ರೂಪಗಳನ್ನು ಸೇರಿಸಿ ಕ್ರಮವಾಗಿ ಎಳ್ಳೆಣ್ಣೆ, ಕಬ್ಬಿಣ, ಹತ್ತಿ, ಬೂದುಕುಂಬಳ, ಉಪ್ಪು, ಎಳ್ಳು, ಕಂಬಳಿ ಎಂಬ ಏಳುದ್ರವ್ಯಗಳಲ್ಲಿ ಚಿಂತಿಸಲಾಗುವುದು.

ನವಗ್ರಹಗಳನ್ನೂ ಒಂಭತ್ತು ಧಾನ್ಯಗಳೆಂಬ ಪ್ರತೀಕಗಳಲ್ಲಿ ಪ್ರತಿಮೆಯಿಟ್ಟು ಆರಾಧಿಸಲಾಗುವುದು. ಸಪ್ತಚಿರಜೀವಿಗಳನ್ನು ಪೂಜಿಸಿ ಪ್ರಾರ್ಥಿಸಲಾಗುವುದು.

**ರಾಮವ್ಯಾಸೌ ಹನೂಮಾಂಶ್ಚ ದ್ರೌಣಿಃ ಕೃಪವಿಭೀಷಣೌ ।**
**ಚಿರಜೀವೀ ಬಲಿಶ್ಚೈವ ಮಾರ್ಕಂಡೇಯಸ್ತಥಾಷ್ಟಮಃ ॥**

ಎಂಬ ಶ್ಲೋಕೋಕ್ತಿಕ್ರಮದಿಂದ ಚಿರಜೀವಿಗಳನ್ನು ತಾರತಮ್ಯ ಕ್ರಮದಿಂದ ಚಿಂತಿಸಿ ಆರೋಗ್ಯಪುರಸ್ಸರ ದೀರ್ಘಾಯುಷ್ಯವನ್ನು ಅನುಗ್ರಹಿಸುವಂತೆ ಪ್ರಾರ್ಥನೆಯನ್ನು ಸಲ್ಲಿಸಲಾಗುತ್ತದೆ.

ಇಲ್ಲಿ ರಾಮನೆಂದರೆ ಪರಶುರಾಮ. ರಾಮ ವ್ಯಾಸರು ಸಾಕ್ಷಾತ್ ಬಲಜ್ಞಾನಗಳಿಗೆ ಪ್ರತೀಕವೆನಿಸಿದ ಭಗವದ್ರೂಪಗಳು. ಅವುಗಳಲ್ಲಿ ತಾರತಮ್ಯವಿಲ್ಲ. ಹಾಗಾಗಿ ರಾಮವ್ಯಾಸೌ ಎಂಬ ಸಮಪ್ರಾಧಾನ್ಯದ ದ್ವಂದ್ವನಿರ್ದೇಶ. ಹನೂಮಾನ್ ಜೀವೋತ್ತಮತತ್ವ, ದ್ರೌಣಿಅಶ್ವತ್ಥಾಮನು ಮನಸ್ತತ್ವ, ಕೃಪಾಚಾರ್ಯ ಏಕಾದಶರುದ್ರರಲ್ಲಿ ಒಬ್ಬನಾದ ವಿಷ್ಕಂಭನ ಅವತಾರ. ರಾಮಭಕ್ತ ವಿಭೀಷಣನಂತೂ ಸಾಕ್ಷಾತ್ ಕಣ್ವಮುನಿ. ಮುಂದಿನ ಮನ್ವಂತರದಲ್ಲಿ ಇಂದ್ರಪದವಿಗೇರುವ ಅರ್ಹತೆಯುಳ್ಳ ಬಲಿ ಓರ್ವ ಚಕ್ರವರ್ತಿ. ವಿಪ್ರಾಶೀರ್ವಾದಬಲದಿಂದ ಹಾಗೂ ಶಿವಾನುಗ್ರಹದಿಂದ ಚಿರಜೀವಿತ್ವವನ್ನು ಪಡೆದವ ಸಪ್ತಕಲ್ಪಜೀವನವುಳ್ಳ ಮಾರ್ಕಂಡೇಯಮುನಿ. ಚಿರಜೀವಿಗಳಲ್ಲಿ ಈ ರೀತಿಯ ತಾರತಮ್ಯಜ್ಞಾನದೊಂದಿಗೆ ಅಶ್ವತ್ಥಾಮಾದಿ ಕ್ರಮದಿಂದ ಆಹುತಿಯನ್ನು ನೀಡಬೇಕು. ಆಹುತಿಕ್ರಮದಲ್ಲಿ ತಾರತಮ್ಯಾನು –ಕ್ರಮವಿಲ್ಲ. ತಾರತಮ್ಯ ಜ್ಞಾನವಿದ್ದರೆ ಸಾಕು.

**ಮೃತ್ಯುಸಪ್ತಕ ದಾನ :**

ಹೋಮ ಪೂರ್ಣಾಹುತಿಯಾದ ಮೇಲೆ ಕಲಶಗಳಲ್ಲಿ ಪ್ರಾರ್ಥನೆ ಯೊಂದಿಗೆ ಪೂಜೆಯನ್ನು ನೆರವೇರಿಸಲಾಗಿದೆ. ಇದೀಗ ಯಜಮಾನ ದಂಪತಿಗಳು ನಿವಾಳಿಸಿ ತೆಗೆದ ಸುವರ್ಣವನ್ನು ತೈಲದಲ್ಲಿ ಹಾಕಿ ತಮ್ಮ ಮುಖಚ್ಛಾಯೆಯನ್ನು ನೋಡುತ್ತಾರೆ. ಹೀಗೆ ನಿರೀಕ್ಷಿತತೈಲವನ್ನು ವಿಪ್ರರಿಗೆ ದಾನವನ್ನೀಯುತ್ತಾರೆ. ಅಲ್ಲದೇ ಮೃತ್ಯುಸಪ್ತಕದ ಆರಾಧನೆಗಾಗಿ ಉಪಯೋಗಿಸಿದ ಕಬ್ಬಿಣ(ಕತ್ತಿ, ತ್ರಿಶೂಲ) ಹತ್ತಿ ಮುಂತಾದ ಏಳು ದ್ರವ್ಯಗಳನ್ನೂ ಸದಕ್ಷಿಣಾಕವಾಗಿ ಏಳು ವಿಪ್ರರಿಗೆ ದಾನವೀಯುತ್ತಾರೆ. ಈ ಮೃತ್ಯುಸಪ್ತಕ ದಾನದಿಂದ ಬದುಕಿರುವಾಗಲೇ ಬರಬಹುದಾಗಿದ್ದ ಅಪಮೃತ್ಯು, ವ್ಯಾಲಮೃತ್ಯು, ಘೋರಮೃತ್ಯು, ದುಷ್ಟಮೃತ್ಯು, ಕಾಲಮೃತ್ಯು, ಕಂಟಕಮೃತ್ಯು,

ಕ್ಷುದ್ರಮೃತ್ಯುಗಳೆಂಬ ಸಪ್ತವಿಧ ಮೃತ್ಯುದೋಷಗಳನ್ನು ಮೃತ್ಯುದೇವ ಪರಿಹರಿಸುತ್ತಾನೆ.

ಕೈಕಾಲು ಮೊದಲಾದ ಅಂಗಗಳು ಕತ್ತರಿಸಿ ಹೋಗುವುದು ಅಪಮೃತ್ಯು. ವಿಷ-ಚೂರ್ಣಾದಿ ಪ್ರಯೋಗದಿಂದ ಶರೀರದ ಬಳಲಿಕೆ ವ್ಯಾಲಮೃತ್ಯು, ಹತ್ತು ಜನರ ಮಧ್ಯೆ ಅವಮಾನವೆಂಬುದು ಘೋರ ಮೃತ್ಯು, ಶತ್ರುಗಳಿಂದ ಸೋತು ಅಪಕೀರ್ತಿಯುಂಟಾಗುವುದು ದುಷ್ಟ ಮೃತ್ಯು, ವ್ಯಾಧಿಪೀಡಿತನಾಗಿ ಸ್ವಾಧೀನತೆಯನ್ನು ಕಳೆದುಕೊಳ್ಳುವುದು ಕಾಲಮೃತ್ಯು. ಲೋಹಶೂಲಾದಿಗಳು ಶರೀರದಲ್ಲಿ ಚುಚ್ಚಿ ಶಸ್ತ್ರಕ್ರಿಯೆ ಗೊಳ್ಳುವುದು ಕಂಟಕಮೃತ್ಯು. ಭಾರ್ಯಾ-ಪುತ್ರಾದಿ ವಿಯೋಗವು ಕ್ಷುದ್ರಮೃತ್ಯು. ಇಂತಹ ಜೀವನದಲ್ಲೇ ಒದಗಬಹುದಾದ ಮೃತ್ಯುದೋಷಗಳ ಪರಿಹಾರಕ್ಕೆ ಮೃತ್ಯುಂಜಯಾರಾಧನೆ ಹಾಗೂ ಮೃತ್ಯುಸಪ್ತಕದಾನ.

**ಕಲಶಾಭಿಷೇಕ :**

ಮೃತ್ಯುಸಪ್ತಕದಾನವೊಂದು ಮಾತ್ರ ಅಭಿಷೇಕಕ್ಕೆ ಮೊದಲು. ಉಳಿದೆಲ್ಲಾ ದಾನಗಳೂ ಕಲಶಾಭಿಷೇಕವಾದ ನಂತರದಲ್ಲಿ.

ಇದೀಗ ದಂಪತಿಗಳು ತುಲಸೀ ಸನ್ನಿಧಿಯಲ್ಲಿ ಮಂಗಳಾಸನದಲ್ಲಿ ಪೂರ್ವಾಭಿಮುಖವಾಗಿ ಕುಳಿತಿದ್ದಾರೆ. ಅಭಿಷೇಕ ಕಾಲವು ಸುಮುಹೂರ್ತವಾಗುವಂತೆ ವಿಪ್ರರು 'ಸುಮುಹೂರ್ತೋಽಸ್ತು' ಎಂದಿದ್ದಾರೆ. ಆಗಸದಲ್ಲಿ ಸೂರ್ಯ ಕಣ್ಣಿಗೆದುರಾಗಿ ಕಾಣಿಸುತ್ತಿದ್ದಾನೆ. ಸ್ವರ್ಚಿತವಾದ ಕಲಶೋದಕಗಳನ್ನು ವಿಪ್ರರು ಮುಂದಿಟ್ಟಿದ್ದಾರೆ. ಪುತ್ರನೇ ಮೊದಲಾದ ಕೌಟುಂಬಿಕರು ಸಹಸ್ರಾಕ್ಷವನ್ನು ಯಜಮಾನ ದಂಪತಿಗಳ ತಲೆಯ ಮೇಲೆ ಹಿಡಿದಿದ್ದಾರೆ. ಸಹಸ್ರಾಕ್ಷದಲ್ಲಿ ಶಾಲಗ್ರಾಮವನ್ನಿಟ್ಟು ಅಭಿಷೇಕ ಆರಂಭವಾಗಿದೆ.

ಸಹಸ್ರ ಕುಂಭೋದಕದ ಅಭಿಷೇಕಕ್ಕೆ ಮಹತ್‌ಫಲವಿದೆ. ಆದರೆ ಅಷ್ಟೊಂದು ಸಂಖ್ಯೆಯ ಅಭಿಷೇಕ ನಮ್ಮಿಂದ ಅಶಕ್ಯ. ಅದಕ್ಕಾಗಿ ಈ

ಸಹಸ್ರಾಕ್ಷದಿಂದ ಅಭಿಷೇಕ. ನೂರಾರು ರಂಧ್ರಗಳುಳ್ಳ ಪಾತ್ರೆ ಸಹಸ್ರಾಕ್ಷ. ಸಾಮಾನ್ಯವಾಗಿ ಬೆಳ್ಳಿ ಅಥವಾ ತಾಮ್ರದಿಂದ ಸಹಸ್ರಾಕ್ಷದ ಹರಿವಾಣವನ್ನು ನಿರ್ಮಿಸಲಾಗುತ್ತದೆ. ಮರದ್ದಾದರೂ ಆಗಬಹುದು. (ಇದು ಇಲ್ಲವಾದರೆ ಜರಡಿ ಬುಟ್ಟಿಯನ್ನು ಹಿಡಿಯಬಹುದು) ಈ ಸಹಸ್ರಾಕ್ಷದಲ್ಲಿ ಶಾಲಗ್ರಾಮ ವನ್ನಿಟ್ಟು ಅದಕ್ಕೆ ಅಭಿಷೇಕಿಸಿದ ನೀರು ಯಜಮಾನ ದಂಪತಿಗಳ ಮೇಲೆ ನೂರಾರು ತೂತುಗಳಿಂದ ಬಿದ್ದಾಗ ನೂರಾರು ಅಭಿಷೇಕದ ಫಲವಿದೆ.

ಈ ಅಭಿಷೇಕವನ್ನು ವಿಪ್ರರು ವೇದಘೋಷದೊಂದಿಗೆ ನಡೆಸುತ್ತಾರೆ. ಮೊದಲು ಪ್ರೋಕ್ಷಣೆ, ಕೊನೆಗೆ ಸ್ನಾನ. ಶಾಂತಿಮಂತ್ರಗಳು, ಮೃತ್ಯುಸೂಕ್ತ, ಅಘಮರ್ಷಣ, ವರುಣಸೂಕ್ತ, ಮಾರ್ಜನ ಮಂತ್ರ, ನವಗ್ರಹಸೂಕ್ತ, ಮೃತ್ಯುನಿವಾರಣ ಮಂತ್ರಗಳಿಂದ ಪ್ರೋಕ್ಷಣವಾಗಿ ಪುರುಷಸೂಕ್ತದಿಂದ ಅಭಿಷೇಕ ನಡೆಯುತ್ತದೆ. ಸಹಸ್ರಾಕ್ಷವನ್ನು ಯಜಮಾನ ಸಂಬಂಧಿಗಳು ಹಿಡಿದು ಅಭಿಷೇಕದಲ್ಲಿ ಭಾಗಿಗಳಾಗುತ್ತಾರೆ. ಮೈಮೇಲೆ ಸುರಿದ ಅಭಿಷೇಕ ಜಲ ಜಾರುತ್ತಿದ್ದಂತೆ ಯಜಮಾನ ದಂಪತಿಗಳು ಸಮಸ್ತ ದುರಿತಗಳೂ ತೊಳೆದುಹೋದಂತೆ ಪರಿಶುದ್ಧಭಾವರಾಗುತ್ತಾರೆ. ಇದೀಗ ಇವರ ಮಕ್ಕಳು ಶುದ್ಧವಸ್ತ್ರದಿಂದ ತಲೆ ಒರೆಸಿ, ಕುಂಕುಮವಿಟ್ಟು, ಕನ್ನಡಿಯಲ್ಲಿ ಮುಖ ತೋರಿಸಿ, ನೂತನ ವಸ್ತ್ರವನ್ನು ಉಡುಗೊರೆಯಿತ್ತು ನಮಸ್ಕರಿಸುತ್ತಾರೆ. ದಂಪತಿಗಳು ಎದ್ದು ಸೂರ್ಯ, ತುಲಸಿ, ವಿಪ್ರರಿಗೆ ವಂದಿಸಿ ನೂತನ ವಸ್ತ್ರವನ್ನು ಉಟ್ಟು ಅಲಂಕೃತರಾಗುತ್ತಾರೆ.

ಅಭಿಷೇಕ ಕಾಲದಲ್ಲಿ ಉಟ್ಟಿದ್ದ ಒದ್ದೆ ಬಟ್ಟೆಯನ್ನು 'ಆಚಾರ್ಯಾಯ ದದ್ಯಾತ್' ಎಂಬ ಮಾತು 'ಶಾಂತಿಪ್ರಕಾಶಿಕ' ಮುಂತಾದ ಗ್ರಂಥಗಳಲ್ಲಿದೆ. 'ದರಿದ್ರಾಯ ದದ್ಯಾತ್' ಎಂದೂ ಕೆಲವೆಡೆ. ನಾವು ಉಟ್ಟಬಟ್ಟೆಯನ್ನು ವಿಪ್ರರಿಗೆ ಕೊಡುವುದೆಂತು? ಎಂಬ ಸಂಕೋಚವಿದ್ದಲ್ಲಿ ನೂತನ ವಸ್ತ್ರ ಸೀರೆಗಳನ್ನು 'ಅಭಿಷೇಕವಸ್ತ್ರ'ಕ್ಕೆ ಪ್ರತಿನಿಧಿಯಾಗಿ ಆಚಾರ್ಯನಿಗೆ ನೀಡುವುದು ಸೂಕ್ತವೆನಿಸುತ್ತದೆ.

## ಮಂಗಲವಸ್ತು ನಿರೀಕ್ಷಣೆ :

'ನಿಮ್ಮ ದರ್ಶನ ಮಾತ್ರದಿಂದ ಜನ್ಮ ಪಾವನವಾಯಿತು' ಎಂಬ ಮಾತನ್ನು ಹಿರಿಯರು ಆಡುವುದಿದೆ. ದರ್ಶನಕ್ಕೆ ಅಥವಾ ನೋಡುವಿಕೆಗೆ ಇರುವ ಮಹತ್ವ ಇದರಿಂದ ಸ್ಫುಟವಾಗುತ್ತದೆ.

ರಾಮಸೇತುವಿನ ದರ್ಶನವು ಬ್ರಹ್ಮಹತ್ಯೆಯಂತಹ ಪಾಪಕ್ಕೂ ಪ್ರಾಯಶ್ಚಿತ್ತ. **"ಸೇತುಂ ದೃಷ್ಟ್ವಾ ಸಮುದ್ರಸ್ಯ ಬ್ರಹ್ಮಹತ್ಯಾಂ ವ್ಯಪೋಹತಿ"** ಎಂಬ ಸ್ಮೃತಿವಾಕ್ಯ ದರ್ಶನಕ್ಕೆ ಪ್ರಾಯಶ್ಚಿತ್ತದ ಸ್ಥಾನವನ್ನು ಕೊಟ್ಟಿದೆ.

ಅದೊಮ್ಮೆ ದೇವತೆಗಳು ಒಂದು ಪ್ರಮಾದವೆಸಗಿದರು. ಬ್ರಹ್ಮನಿಂದ ಶಪ್ತರಾಗಿ ನಷ್ಟಜ್ಞಾನರಾದರು. ತಮ್ಮ ಮಕ್ಕಳಲ್ಲಿ ಪ್ರಾಯಶ್ಚಿತ್ತ ಸ್ವರೂಪದ ಬಗೆಗೆ ಪ್ರಶ್ನಿಸಿದರು. 'ಪಿತೃ ದೇವತೆಗಳು' ಎಂದು ಕರೆಸಿಕೊಳ್ಳುವ ಈ ದೇವಸುತಜ್ಞಾನಿಗಳು ದೇವತೆಗಳಿಗೆ ಜ್ಞಾನೋಪದೇಶವನ್ನು ಮಾಡಿ ಪ್ರಾಯಶ್ಚಿತ್ತದ ಬಗ್ಗೆ ಒಂದು ಮಾತು ಹೇಳಿದರು

**ಪ್ರಾಯಶ್ಚಿತ್ತಾನಿ ಧರ್ಮಜ್ಞಾ ವಾಙ್ಮನಃ ಕರ್ಮಜಾನಿ ವೈ ।**
**ಶಂಸಂತಿ ಕುಶಲಾ ನಿತ್ಯಂ ಚಕ್ಷುರ್ಭ್ಯಾಮಪಿ ನಿತ್ಯಶಃ ॥**

**(ಹರಿವಂಶ ಪರ್ವ 17–27)**

ಮನಸ್ಸು ಮಾತು ಹಾಗೂ ಕರ್ಮಗಳಿಂದ ಮಾತ್ರವಲ್ಲದೇ ಕಣ್ಣುಗಳಿಂದಲೂ 'ಪ್ರಾಯಶ್ಚಿತ್ತ' ನಡೆಯುತ್ತದೆ. ಹರಿಸ್ಮರಣೆಯು ಮಾನಸ ಪ್ರಾಯಶ್ಚಿತ್ತ 'ಇಂತಹ ತಪ್ಪು ಮಾಡಿದ್ದೇನೆ. ಇನ್ನು ಮುಂದೆ ಇಂತಹ ತಪ್ಪನ್ನು ಮಾಡುವುದಿಲ್ಲ' ಎಂಬ ದೃಢ ನಿರ್ಧಾರದೊಂದಿಗೆ ಹಿರಿಯರ ಮುಂದೆ ಮಾಡಿದ ತಪ್ಪನ್ನು ಹೇಳಿಕೊಳ್ಳುವುದು ವಾಚಿಕ ಪ್ರಾಯಶ್ಚಿತ್ತ.

ತಪ್ಪು ಕೆಲಸಗಳನ್ನು ಪಶ್ಚಾತ್ತಾಪದೊಂದಿಗೆ ಹೇಳಿಕೊಳ್ಳುವುದು ಪಾಪಶೋಧಕ. ಒಳ್ಳೆಯ ಕೆಲಸಗಳನ್ನು ಹೇಳಿಕೊಂಡು ಬರುವುದು

ಪುಣ್ಯನಾಶಕ. ಅಸತ್ಕರ್ಮವನ್ನು ಮುಚ್ಚಿಡುವುದು ಬೇಡ. ಪುಣ್ಯ ಕೆಲಸವನ್ನು ಡಂಗುರ ಸಾರುವುದು ಬೇಡ.

ಅಚ್ಯುತಾನಂತಗೋವಿಂದ ನಾಮೋಚ್ಚಾರಣೆಯೂ ವಾಚಿಕ ಪ್ರಾಯಶ್ಚಿತ್ತ. ಕೃಚ್ಛ್ರಚಾಂದ್ರಾಯಣ-ತೀರ್ಥಸ್ನಾನಾದಿಗಳು ಕಾಯಿಕ ಪ್ರಾಯಶ್ಚಿತ್ತಗಳು. ಇದರೊಂದಿಗೆ 'ಚಕ್ಷುರ್ಭ್ಯಾಮಪಿ ನಿತ್ಯಶಃ' ಎಂಬ ಮಾತಿನಂತೆ ಈ ಎರಡು ಕಣ್ಣುಗಳಿಂದಲೂ ದಿನನಿತ್ಯ ಪ್ರಾಯಶ್ಚಿತ್ತ ನಡೆದಿದೆ. ಶುಭವಸ್ತುಗಳ ನಿರೀಕ್ಷಣೆಯೂ ಒಂದು ಪ್ರಾಯಶ್ಚಿತ್ತ. ಷಷ್ಟಿಪೂರ್ತಿಯ ದಿನ ಕೆಲವೊಂದು ಶುಭವಸ್ತುಗಳನ್ನು ಮಂತ್ರಪೂರ್ವಕ ವಾಗಿ ನಿರೀಕ್ಷಿಸುವುದಿದೆ. ಕಲಶಾಭಿಷೇಕದಂತೆ ಈ ಮಂಗಲ ನಿರೀಕ್ಷಣೆಯೂ ಶಾಂತಿಯ ಪ್ರಧಾನ ಭಾಗ.

ಕಂಚಿನ ಪಾತ್ರೆಯಲ್ಲಿದ್ದ ದ್ರವೀಭೂತ ಆಜ್ಯದಲ್ಲಿ ಯಜಮಾನ ದಂಪತಿಗಳು ತಮ್ಮ ಪ್ರತಿಬಿಂಬವನ್ನು ನೋಡುತ್ತಾರೆ. ಆ ರೀತಿ ನಿರೀಕ್ಷಿತ ಆಜ್ಯವನ್ನು ದಾನವೀಯುತ್ತಾರೆ.

ನಿರೀಕ್ಷಣೀಯ ದ್ರವ್ಯಗಳು ಮುಖ್ಯವಾಗಿ ಹನ್ನೆರಡು. ದೀಪ, ಫಲ, ಗರಿಕೆ, ಪುಷ್ಪ, ಗೋರೋಚನ, ಕನ್ನಡಿ, ಮೊಸರು, ಸಾಸಿವೆ, ತುಪ್ಪ, ಬಂಗಾರ, ಅನ್ನ, ಭೂಮಿ.

'ಓ ಅಗ್ನಿದೇವ, ನಮ್ಮನ್ನು ಆ ಕತ್ತಲೆಯ ಮಾರ್ಗದಿಂದ ಪಾರುಮಾಡು' ಎಂಬ ಅರ್ಥದ ಮಂತ್ರದಿಂದ ದೀಪದ ನಿರೀಕ್ಷಣೆ.

ಫಲವನ್ನು ನಿರೀಕ್ಷಿಸಿ 'ಫಲದೇವತೆಗಳಿರಾ, ನಮ್ಮನ್ನು ಪಾಪಗಳಿಂದ ವಿಮೋಚನೆಗೊಳಿಸಿ, ನೋ ಮುಂಚಂತು ಅಂಹಸಃ' ಎನ್ನುತ್ತಾನೆ.

ಗರಿಕೆಯನ್ನು ನಿರೀಕ್ಷಿಸುತ್ತಾ 'ಕಾಂಡ ಕಾಂಡಗಳಿಂದ ಟಿಸಿಲೊಡೆದು ಬೆಳೆಯುವ ಗರಿಕೆಯಂತೆ ನಮ್ಮ ಸಂತತಿಯೂ ಸಾವಿರವಾಗಿ ವೃದ್ಧಿಹೊಂದುವಂತೆ ಅನುಗ್ರಹಿಸು' ಎಂದು ದೂರ್ವಾದೇವಿಯನ್ನು ಪ್ರಾರ್ಥಿಸುತ್ತಾನೆ. **"ಏವಾ ನೋ ದೂರ್ವೇ ಪ್ರತನು ಸಹಸ್ರೇಣ"**

ಅನ್ನದ ನಿರೀಕ್ಷಣೆಯೊಂದಿಗೆ 'ಓ ಅನ್ನಪತಿ, ಕೊಡುವುದಕ್ಕೂ ಉಣ್ಣುವುದಕ್ಕೂ ಬೇಕಾಗುವಷ್ಟು ಆರೋಗ್ಯಪ್ರದ ಅನ್ನವನ್ನು ಎಮಗೆ ನೀಡು' 'ಅನ್ನಪತೇಽನ್ನಸ್ಯ ನೋ ದೇಹಿ' ಎನ್ನುತ್ತಾನೆ.

ಗೋರೋಚನವನ್ನು ನಿರೀಕ್ಷಿಸಿ ಯಜಮಾನನ ಶಿರಸ್ಸಿನ ಬ್ರಹ್ಮರಂಧ್ರದ ಜಾಗದಲ್ಲಿ ಗೋರೋಚನದಿಂದ ವಿಪ್ರರು ಒತ್ತಿದರೆ ಪತ್ನಿಯ ನೆತ್ತಿಯಲ್ಲಿ ಯಜಮಾನನು ಗೋರೋಚನದಿಂದ ನೇವರಿಸುತ್ತಾನೆ.

ಪುಷ್ಪದ ನಿರೀಕ್ಷಣೆಯೊಂದಿಗೆ ದಂಪತಿಗಳು ಪರಸ್ಪರರು ಪುಷ್ಪಹಾರವನ್ನು ಹಾಕಿಕೊಳ್ಳುತ್ತಾರೆ. ಸುವರ್ಣ ನಿರೀಕ್ಷಣೆ ಹಾಗೂ ಸುವರ್ಣಧಾರಣೆ ನಡೆಯುತ್ತದೆ. ಈ ಸಂದರ್ಭದಲ್ಲಿ ಮಂಗಳಾಷ್ಟಕ ಪಠಿಸಿ, ವಾದ್ಯಘೋಷಗಳೂ ಕೇಳಿಸುತ್ತವೆ. ಕೆಲವೊಮ್ಮೆ ಮದುವೆಯ ವಿಜೃಂಭಣೆ ಇಲ್ಲಿ ಮೇಳೈಸುವುದು ಉಂಟು. ಈ ಸುವರ್ಣಧಾರಣೆ ಎಂಬ ಕಾರ್ಯವು ಕೆಲವೆಡೆ "ಮಾಂಗಲ್ಯಧಾರಣೆ"ಯಾಗಿ ಮಾರ್ಪಟ್ಟಿದೆ.

**ಸತಿಲಗುಡಪಯಃಪಾನ :**

ದಂಪತಿಗಳು ಕೈಯಲ್ಲಿ ನಾಲ್ಕು ಉದ್ದು ಮುಳುಗುವಷ್ಟು ಭಗವನ್ನಿವೇದಿತ ಹಾಲನ್ನು ಹಾಕಿಕೊಳ್ಳುತ್ತಾರೆ. ಅದರಲ್ಲಿ ಸ್ವಲ್ಪ ಬೆಲ್ಲ ಹಾಗೂ ಎಳ್ಳನ್ನೂ ಸೇರಿಸಿಕೊಳ್ಳುತ್ತಾರೆ. ದೀರ್ಘಾಯುಷಿಯಾದ ಮಾರ್ಕಂಡೇಯನನ್ನು ಚಿಂತಿಸುತ್ತಾರೆ.

**ಸತಿಲಂ ಗುಡಸಂಮಿಶ್ರಮ್ ಅಂಜಲ್ಯರ್ಧಮಿತಂ ಪಯಃ ।**
**ಮಾರ್ಕಂಡೇಯಾದ್ ವರಂ ಲಬ್ಧ್ವಾ ಪಿಬಾಮ್ಯಾಯುಷ್ಯವೃದ್ಧಯೇ ॥**

ಎನ್ನುತ್ತಾ ಕುಡಿಯುತ್ತಾರೆ. ತಿಲ, ಗುಡ, ಕ್ಷೀರಗಳು ಆಯುರ್ವರ್ಧಕ. ಕ್ಷೀರವ್ರತ ಕಾಲದಲ್ಲಿ ಹಾಲಿನ ಬದಲು ಹುಳಿಯಿಲ್ಲದ ಮೊಸರು. 'ಅನಾ(ನ) ಮ್ಲಂ ತು ದಧಿ ಕ್ಷೀರಮ್'

## ರಕ್ಷಾಬಂಧ :

ರೇಶ್ಮೆಯ ಪುಟ್ಟ ವಸ್ತ್ರವೊಂದರಲ್ಲಿ ದೂರ್ವಾ, ಸರ್ಷಪ(ಬಿಳಿ ಸಾಸಿವೆ), ಗೋರೋಚನ, ಪಂಚರತ್ನಗಳನ್ನು ಹಾಕಿ ಗಂಟು ಹಾಕಿ ರಕ್ಷಾ ಮಂತ್ರ(ಅಸ್ತ್ರಮಂತ್ರ)ಗಳಿಂದ ಅಭಿಮಂತ್ರಿಸುತ್ತಾರೆ. ಇದನ್ನು ಪುರೋಹಿತರು ಯಜಮಾನನ ಬಲಬಾಹುವಿನ ಮೂಲದಲ್ಲಿ 'ರಕ್ಷ' ಎಂದು ಕೊನೆಗೊಳ್ಳುವ ರಕ್ಷಾಮಂತ್ರದಿಂದ ಕಟ್ಟುತ್ತಾರೆ. ವಿಪ್ರರೆಲ್ಲಾ ಕೈಯಲ್ಲಿ ಗರಿಕೆ ಹಾಗೂ ಅಕ್ಷತೆಯನ್ನು ಹಿಡಿದು 'ಆಯುಷ್ಯಂ ವರ್ಚಸ್ಯಂ....' ಮುಂತಾದ ಹಲವು ಆಯುಷ್ಯಮಂತ್ರಗಳನ್ನು ಹೇಳಿ ನಮ್ರರಾದ ದಂಪತಿಗಳ ಶಿರಸ್ಸಿಗೆ ದೂರ್ವಾಕ್ಷತೆಗಳನ್ನು ಹಾಕುತ್ತಾರೆ.

## ಶತಮಾನಾದಿ ದಾನ

ಶಾಂತಿಕರ್ಮಗಳಲ್ಲಿ ದಾನಪ್ರಕ್ರಿಯೇ ಬಹಳ ಮುಖ್ಯವಾದುದು. ಉಷ್ಣೀಷಾದಿಗಳಿಂದ ಅಲಂಕೃತರಾದ ದಂಪತಿಗಳು ವಿಹಿತ ದಾನಗಳನ್ನೆಲ್ಲಾ ನೀಡುತ್ತಾರೆ. ಉಷ್ಣೀಷ(ಮುಂಡಾಸು)ವನ್ನು ತೆಗೆದಿಟ್ಟು ದಾನವನ್ನಿತ್ತು ನಮಿಸುವುದು ಉಚಿತವೆನಿಸುತ್ತದೆ.

ಈಗ ದಾನಗಳಿಗಾಗಿ ಸಂಕಲ್ಪಿಸುತ್ತಾನೆ. ನೂರು(ಸುವರ್ಣ) ನಾಣ್ಯಗಳನ್ನು ಕಂಚಿನ ಪಾತ್ರೆಯಲ್ಲಿಟ್ಟು ಅಕ್ಕಿಯಿಂದ ಮುಚ್ಚಿ ಅದರಲ್ಲಿ ಬ್ರಹ್ಮನನ್ನು ಆವಾಹಿಸಿ ವಿಪ್ರನಿಗೆ ದಾನವೀಯುತ್ತಾನೆ. ಇದು ಶತಮಾನದಾನ. ದಾನದಲ್ಲಿ ಶ್ರದ್ಧೆ ಮುಖ್ಯ. ಪ್ರತಿಗೃಹೀತೃವಿನ ಪಾತ್ರತೆಯೂ ಪ್ರಧಾನ. ದಾತೃವಿನ ಸಾಮರ್ಥ್ಯಾನುಗುಣ ನಿರ್ವಂಚನೆಯೂ ಅಷ್ಟೇ ಮುಖ್ಯ. **"ವಿತ್ತಶಾಠ್ಯಂ ನ ಕಾರಯೇತ್"** ದಾನಾದಿಗಳಲ್ಲಿ ಜಿಪುಣತನ ಬೇಡ ಎಂಬುದು ಆಚಾರ್ಯ ಮಧ್ವರ ಮಾತು.

ಕಲಶದಾನಗಳು, ನವಗ್ರಹಧಾನ್ಯದಾನ, ನಿರೀಕ್ಷಿತದ್ರವ್ಯದಾನಗಳು ಕರ್ತವ್ಯಗಳು. ದಶದಾನವನ್ನೂ ಮಾಡುವುದು ಶ್ರೇಷ್ಠ. ಇದರೊಂದಿಗೆ ಹದಿನಾರು ಮಂದಿ ಮುತ್ತೈದೆಯರನ್ನು ಬಾಗಿನವಿತ್ತು ಆರಾಧಿಸುವುದು

ಒಂದು ವಿಧಿ. ಇದರಲ್ಲಿ ಕುಮುದಾ, ಮಾಧವೀ ಮೊದಲಾದ ಹದಿನಾರು ಲಕ್ಷ್ಮೀರೂಪಗಳ ಆವಾಹನೆಯಿದೆ. ಆದ್ದರಿಂದಲೇ ಇದನ್ನು 'ಕುಮುದಾದಿ ಪೂಜಾ' ಎನ್ನಲಾಗುತ್ತದೆ.

ಕೊನೆಯಲ್ಲಿ ನೂರಕ್ಕೆ ಕಡಿಮೆಯಿಲ್ಲದೆ ಅನ್ನಸಂತರ್ಪಣೆ. ಬರಿಯ ಬ್ರಾಹ್ಮಣರಿಗಲ್ಲ. ದೀನಾನಾಥಮಂದಿಗೂ ಧರ್ಮ ನಡೆಸಬೇಕು. ಬ್ರಾಹ್ಮಣರಿಗಿತ್ತದ್ದು ದಾನ. ಅನ್ಯರಿಗಿತ್ತದ್ದು ಧರ್ಮ. **'ಬ್ರಾಹ್ಮಣಾನ್ ಭೋಜಯೇತ್ ಶಕ್ತ್ಯಾ ದೀನಾನಾಥಾಂಶ್ಚ ತೋಷಯೇತ್'** ಬ್ರಾಹ್ಮಣರಿಗೆ ತಮ್ಮ ಶಕ್ತಿಗನುಗುಣವಾಗಿ ಭೋಜನವನ್ನಿತ್ತು ದೀನರನ್ನು ಅನಾಥರನ್ನೂ ವಸ್ತ್ರ ಅನ್ನಾದಿಗಳಿಂದ ಖುಷಿಗೊಳಿಸಬೇಕು. ಇದು ಶೌನಕರ ಮಾತು. ಕೊನೆಗೆ ಅವರು ಹೇಳುವ ಮಾತು –

**ಏವಂ ಯಃ ಕುರುತೇ ಶಾಂತಿಂ ಭಕ್ತಿಶ್ರದ್ಧಾಸಮನ್ವಿತಃ ।**
**ಸ ಸರ್ವಾರಿಷ್ಟನಿರ್ಮುಕ್ತೋ ಜೀವೇದ್ ವರ್ಷಶತಂ ಸುಖೀ ॥**

ಈ ರೀತಿ ಶಾಂತಿ ಮಾಡಿಕೊಂಡವನಿಗೆ ಸರ್ವಾರಿಷ್ಟ ನಿವೃತ್ತಿ. ಈತ ದೀರ್ಘಾಯುವಾಗಿ ನೆಮ್ಮದಿಯ ಪೂರ್ಣಬಾಳು ನಡೆಸುತ್ತಾನೆ.

* * *

# ಭೀಮರಥಶಾಂತಿ – ವಿಜಯರಥಶಾಂತಿ

"ಮನುಷ್ಯ ಜೀವನದ 70ನೇ ವರ್ಷದಲ್ಲಿ ನಡೆಸಬೇಕಾದ ಶಾಂತಿ ಭೀಮರಥಶಾಂತಿ" 'ಸಪ್ತತಿಶಾಂತಿ' ಎಂದೂ ಇದನ್ನು ಕರೆಯುವುದಿದೆ.

ಅರವತ್ತೊಂಬತ್ತು ಪೂರ್ತಿಯಾಗಿ 70ನೇ ವರ್ಷದ ಜನ್ಮನಕ್ಷತ್ರ ದಂದು ಈ ಶಾಂತಿಯನ್ನು ನಡೆಸಬೇಕು. 70 ಭರ್ತಿಯಾಗಿ 71ನೇ ವರ್ಷದ ಜನ್ಮನಕ್ಷತ್ರದಂದು ಈ ಶಾಂತಿಯನ್ನು ಆಚರಿಸಿಕೊಳ್ಳುವ ಕ್ರಮವೂ ಕೆಲವೆಡೆ ಇದೆ. ಕೆಲವೊಬ್ಬರು 70 ಪೂರ್ತಿಯಾಗುವುದಕ್ಕೆ ಆರು ತಿಂಗಳು ಮುಂಚೆ ಅಂದರೆ 69 ವರ್ಷ ತುಂಬಿ ಆರು ತಿಂಗಳು ದಾಟಿದ ಜನ್ಮನಕ್ಷತ್ರದಲ್ಲಿ ಈ ಶಾಂತಿಯ ಆಚರಣೆ ಎನ್ನುತ್ತಾರೆ. ಯಾವುದೇ ಶಾಂತಿಯನ್ನು ಕ್ಲೃಪ್ತಕಾಲಕ್ಕೆ ಆರು ತಿಂಗಳು ಮುಂಚೆ ನಡೆಸಬೇಕು ಎಂಬ ಸಾಮಾನ್ಯನಿಯಮ ಇದಕ್ಕೆ ಆಧಾರ.

**"ಜನನಾತ್ ಸಪ್ತತೌ ವರ್ಷೇ ಮೃತ್ಯುರ್ಭೀಮರಥೋ ಭವೇತ್"** ಎಂಬ ಶೌನಕೋಕ್ತಿ 70ನೇ ವರ್ಷಕ್ಕೆ ಈ ಭೀಮರಥ ಮೃತ್ಯು ಪ್ರಾಪ್ತನಾಗುತ್ತಾನೆ ಎನ್ನುತ್ತಿದೆ. ಆದ್ದರಿಂದ 69 ಭರ್ತಿಯಾಗಿ 70ನೇ ವರ್ಷದ ಆರಂಭದ ಜನ್ಮಮಾಸ ಜನ್ಮನಕ್ಷತ್ರದಂದು ನಡೆಸುವುದು ಉತ್ತಮ ಕಲ್ಪವೆಂದು ನನ್ನ ಅಭಿಪ್ರಾಯ.

ಉಗ್ರರಥಶಾಂತಿಗೂ ಭೀಮರಥಕ್ಕೂ ಇದು ವ್ಯತ್ಯಾಸ. ಉಗ್ರರಥ 60 ವರ್ಷ ಪೂರ್ತಿಯಾದಾಗ. ಭೀಮರಥ 70 ಆರಂಭವಾಗುವಾಗ.

## ಶಾಂತಿವಿಧಾನ

ಭೀಮರಥ ಶಾಂತಿಯಲ್ಲಿ ಐದು ಕಲಶಗಳು. ಇಲ್ಲಿ ಪ್ರಧಾನದೇವತೆ ಭೀಮರಥನಾಮಕ ಮೃತ್ಯುಂಜಯರುದ್ರ. ಅಧಿದೇವತೆ ಬ್ರಹ್ಮಾ. ಪ್ರತ್ಯಧಿದೇವತೆ ವಿಷ್ಣು. ಈ ತ್ರಿಮೂರ್ತಿಗಳಿಗೆ ಮೂರು ಕಲಶ. ಉಪಪ್ರಧಾನ ದೇವತೆಯಾದ ತ್ರ್ಯಂಬಕನಿಗೊಂದು. ನವಗ್ರಹಕಲಶ ಕೊನೆಯದು.

ನವಗ್ರಹ, ತ್ರಿಮೂರ್ತಿಗಳು ಹಾಗೂ ತ್ರ್ಯಂಬಕನಿಗೆ ಆಹುತಿಯನ್ನು ನೀಡುವ ಹೋಮಪ್ರಕ್ರಿಯೆ ಇಲ್ಲಿದೆ.

ಹೋಮಾನಂತರ ಷಷ್ಟಿಪೂರ್ತಿಶಾಂತಿಯಂತೆಯೇ ಕಲಶಾಭಿಷೇಕ. ಮಂಗಲವಸ್ತು ನಿರೀಕ್ಷಣೆ, ದಾನಧರ್ಮಾದಿಗಳು ಕರ್ತವ್ಯ.

## ಭೀಮರಥ – ಭೀಮರಥೀ

ಭಯ ಹುಟ್ಟಿಸುವವ ಭೀಮ. 'ಬಿಭೇತ್ಯಸ್ಮಾತ್ ಇತಿ ಭೀಮಃ' ಮನುಷ್ಯ ತನ್ನ ಶರೀರವೆಂಬ ರಥದಲ್ಲಿ ಕುಳಿತು ಆಯುಸ್ಸೆಂಬ ಹೆದ್ದಾರಿ ಯಲ್ಲಿ ಗುರಿಯಿದ್ದೋ ಇಲ್ಲದೆಯೋ ಸಾಗಿದ್ದಾನೆ. 60 ವರ್ಷದ ತನಕದ ದಾರಿ ಸುಗಮ್ಯ. ರಥವೂ ಸುಗಮ. 60ಕ್ಕೆ ದೇಹರಥ ಉಗ್ರರಥವಾಗ ತೊಡಗಿತು. ಅಲ್ಲಿ ಉಗ್ರರಥನ ಅನುಗ್ರಹದಿಂದ ಮುಂದೆ ನಡೆದು 70ಕ್ಕೆ ಬಂದಿದ್ದೇವೆ. ಇದೀಗ ರಥ ಹಳತಾಗಿದೆ. ಭಯ ಹುಟ್ಟಿಸುವ ಸಾಧ್ಯತೆಯಿದೆ. ಈಗ ಭಯನಿವಾರಕ ಭಗವಂತನನ್ನು ಪೂಜಿಸಬೇಕು. ಇದೇ ಭೀಮರಥ ಶಾಂತಿ.

ಭೀಮರಥೀ ಎಂಬುದು ಬೇರೆ. ಅದೊಂದು ರಾತ್ರಿಯ ಹೆಸರು. ಮನುಜ ಜೀವನದ 77ನೇ ವರ್ಷದ 7ನೇ ತಿಂಗಳಿನ ರಾತ್ರಿಗೆ ಭೀಮರಥಿ ಎಂದು ಹೆಸರಿದೆ.

**ಸಪ್ತಸಪ್ತತಿಮೇ ವರ್ಷೇ ಸಪ್ತಮೇ ಮಾಸಿ ಸಪ್ತಮೀ ।**
**ರಾತ್ರಿರ್ಭೀಮರಥೀ ನಾಮ ನರಾಣಾಮತಿ ದುಸ್ತರಾ ॥**

**ತಾಮತೀತ್ಯ ನರೋ ಯೋಽಸೌ ದಿನಾನಿ ಯಾನಿ ಜೀವತಿ ।**
**ಕ್ರತುಭಿಸ್ತಾನಿ ತುಲ್ಯಾನಿ ಸುವರ್ಣಶತ ದಕ್ಷಿಣೈಃ ॥**

ಭೀಮರಥಿಯೆಂಬ ರಾತ್ರಿಯನ್ನು ಕಳೆದವನು ಅಂದರೆ 78ನೇ ವರ್ಷದ ನಂತರವೂ ಜೀವಿಸುವವ ಭಾಗ್ಯಶಾಲಿ. ಅನಂತರದ ಆತನ ಒಂದೊಂದು ದಿನದ ಸಾಧನೆಯೂ ನೂರುಸುವರ್ಣಗಳನ್ನು ದಕ್ಷಿಣೆಯಿತ್ತು ಮಾಡಿದ ಯಾಗಕ್ಕೆ ತುಲ್ಯ.

ಇಲ್ಲಿ ಹೇಳಿದ ಭೀಮರಥಿಗೂ ಈ 70ನೇ ವರ್ಷದ ಭೀಮರಥ ಶಾಂತಿಗೂ ಸಂಬಂಧವಿಲ್ಲ.

ಭೀಮರಥಿಯೆಂಬ ಕಾಳರಾತ್ರಿಯು ದೋಷವಲ್ಲ. ಅಲ್ಲಿಗೆ ಶಾಂತಿ ವಿಧಿಯನ್ನು ಪೌರೋಹಿತ್ಯ ಗ್ರಂಥಗಳು ನಿರೂಪಿಸಿಲ್ಲ. 78ನೇ ವರ್ಷ ಆರಂಭವಾಗುವಾಗ ವಿಜಯರಥಶಾಂತಿಯನ್ನು ಹೇಳಿದೆ. 70ರ ಭೀಮರಥ ಹಾಗೂ 78ರ ವಿಜಯರಥಗಳೇ ಭೀಮರಥೀ ಎಂಬ ಕಾಳರಾತ್ರಿಗೂ ಶಾಂತಿಕಾರಕವಾಗಿದ್ದು ಪ್ರತ್ಯೇಕ ಶಾಂತಿಯ ವಿಧಿಯಿಲ್ಲ. ಹಾಗಿದ್ದೂ ವೈದ್ಯಕ ಗ್ರಂಥ ಹೇಳಿದಂತೆ –

**ಗತಿಃ ಪ್ರದಕ್ಷಿಣಂ ವಿಷ್ಣೋಃ ಜಲ್ಪನಂ ಮಂತ್ರಭಾಷಣಮ್ ।**
**ಧ್ಯಾನಂ ವಿಷ್ಣೋಃ ಸುಧಾ ಚಾನ್ನಂ ಭೀಮರಥ್ಯಾಃ ಫಲಶ್ರುತಿಃ ॥**

ತನ್ನ 77ನೇ ವರ್ಷ 7ನೇ ತಿಂಗಳ 7ನೇ ದಿನದಂದು ಪ್ರಾಪ್ತವಾಗುವ ಭೀಮರಥೀಕಾಳರಾತ್ರಿಯನ್ನು ಶುಭಪ್ರದವಾಗಿಸಲು ವಿಷ್ಣುಪ್ರದಕ್ಷಿಣೆ, ವಿಷ್ಣು ಕಥಾಪಠನ, ಶ್ರವಣಗಳು, ಆಯುರ್ಮಂತ್ರಪಾರಾಯಣ, ಭಗವದ್‌ಧ್ಯಾನ, ಅಮೃತವಲ್ಲೀ–ಕ್ಷೀರಗಳಿಂದ ಹೋಮ, ಅನ್ನದಾನ ಇವು ವಿಧಾನಗಳಾಗಿವೆ.

ವಿಶೇಷವೆಂದರೆ ವೈದ್ಯಕ ಗ್ರಂಥದಲ್ಲಿ, ವಾಚಸ್ಪತ್ಯಕೋಶದಲ್ಲಿ ಈ ಭೀಮರಥಿಯ ಉಲ್ಲೇಖವಿದ್ದರೂ ಪೌರೋಹಿತ್ಯ–ಧರ್ಮಗ್ರಂಥಗಳಲ್ಲಿ ಇದರ ಬಗ್ಗೆ ಕಿರುಮಾತೂ ಇಲ್ಲ. 70ರಲ್ಲಿ ಭೀಮರಥ 78ರ ಆರಂಭದಲ್ಲಿ ವಿಜಯರಥ ಶಾಂತಿಗಳನ್ನು ನಡೆಸಿಕೊಂಡ ಮೇಲೆ ಈ 77ರ 7ನೇ ದಿನದಲ್ಲಿ

ಶಾಂತಿಯೊಂದನ್ನು ನಡೆಸುವುದು ಬೇಡ. ಆ ಬಗ್ಗೆ ವಿಧಿಯಿಲ್ಲ. ಹೊಸ ಪರಂಪರೆಯನ್ನು ಆರಂಭಿಸಬೇಕಾಗಿಲ್ಲ. ಹೀಗಿದ್ದೂ ಏನಾದರೂ ಅಂದು ಮಾಡಬೇಕು ಎಂದಿದ್ದರೆ ಅಮೃತವಲ್ಲಿಯನ್ನು ಹಾಲು-ತುಪ್ಪದಲ್ಲಿ ಅದ್ದಿ ಧನ್ವಂತರಿಗೆ ಆಹುತಿ ನೀಡಿ. ಧನ್ವಂತರಿ ಹೋಮವನ್ನು ಎಂದು ಬೇಕಾದರೂ ಆಚರಿಸಬಹುದು. ಅದು ಆಯುಃಪ್ರದ. ಆರೋಗ್ಯಪ್ರದ. ಪರಮಫಲಪ್ರದ.

## ವಿಜಯರಥಶಾಂತಿ

**'ವಿಜಯಾಖ್ಯರಥೋ ಮೃತ್ಯುಃ ಅಷ್ಟಾಸಪ್ತತಿಮೇ ಭವೇತ್'** ಎಂಬುದು ಶೌನಕೋಕ್ತಿ. 78ನೇ ವರ್ಷದ ಆರಂಭದಲ್ಲಿ ಬರುವ ಜನ್ಮನಕ್ಷತ್ರದಲ್ಲಿ ವಿಜಯರಥಶಾಂತಿ.

ಇಲ್ಲಿಯೂ ಪಂಚಕಲಶಗಳು. ವಿಜಯರಥಾಖ್ಯಮೃತ್ಯುಂಜಯ ಪ್ರಧಾನದೇವತೆ.

ಷಷ್ಟಿಪೂರ್ತಿಶಾಂತಿಯಂತೆ ವಿಸ್ತೃತ ಹೋಮವಿಧಿಯಿದೆ. ನೃಸಿಂಹ, ನವಗ್ರಹ, ಮೃತ್ಯುಂಜಯ, ಮಾರ್ಕಂಡೇಯ, ಚಿರಂಜೀವಿ ವಿಶ್ವೇದೇವತೆ ಗಳು ದಿಕ್ಪಾಲಕರೇ ಮುಂತಾದವರಿಗೆ ಅಮೃತವಲ್ಲಿ-ಪಾಯಸ ಮುಂತಾದ ದ್ರವ್ಯಗಳಿಂದ ಆಹುತಿಯಿದೆ.

ರಕ್ಷೆಗಾಗಿ ಮಂಗಲವಸ್ತು ನಿರೀಕ್ಷಣೆ ಕರ್ತವ್ಯ. ನಿರೀಕ್ಷಣೆಗಾಗಿ ಹದಿನಾಲ್ಕು ದ್ರವ್ಯಗಳು. 1.ಬಂಗಾರ, 2.ದರ್ಪಣ, 3.ಗಂಧ, 4.ಪುಷ್ಪ-ಮಾಲಾ, 5.ವಸ್ತ್ರ, 6.ದೀಪ, 7.ಫಲ, 8.ದೂರ್ವಾ, 9.ಗೋರೋಚನ, 10.ದಧಿ, 11.ಸಾಸಿವೆ, 12.ಘೃತ, 13.ಅನ್ನ, 14.ರಕ್ಷಾಸೂತ್ರ ಹೀಗೆ ಹದಿನಾಲ್ಕು ದ್ರವ್ಯಗಳನ್ನು ಆಯಾ ಮಂತ್ರಗಳಿಂದ ದಿಟ್ಟಿಸಿ ಧರಿಸುವ ವಿಧಿ ಬಹಳ ಮುಖ್ಯವಾದುದು.

ಕಲಶಗಳ ಮುಂದೆ ಯಜಮಾನನು ಮಾರ್ಕಂಡೇಯದೃಷ್ಟವಾದ ಮೃತ್ಯುಹರಸ್ತೋತ್ರವನ್ನು ಪಠಿಸುತ್ತಾನೆ. ಎಂಟು ಬಾರಿಯಾದರೂ ಈ ಮೃತ್ಯುಹರಸ್ತೋತ್ರದ ಆವೃತ್ತಿ ನಡೆಸಬೇಕು.

"ಮೃತ್ಯುಹರ ಸ್ತೋತ್ರ" ಮಾರ್ಕಂಡೇಯನಿಗೆ ಆಯುಷ್ಯವನ್ನಿತ್ತ ವಿಷ್ಣುಸ್ತುತಿ. ಭಗವಂತನನ್ನು ಶರಣುಹೊಂದಿದ ಭಕ್ತನನ್ನು ಮೃತ್ಯು ಮುಟ್ಟಲಾರ ಎನ್ನುವ ಎಂಟೇ ಶ್ಲೋಕಗಳ ಮೃತ್ಯ್ವಷ್ಟಕ ಸ್ತುತಿಯಿದು. ಮುಂದಿನ ನಾಲ್ಕು ಶ್ಲೋಕಗಳಲ್ಲಿ ಫಲಶ್ರುತಿಯಿದೆ. ನಿತ್ಯಪಠನಯೋಗ್ಯವೂ ಹೌದು. ಈ ಪುಟ್ಟಸ್ತುತಿಯನ್ನು ಇಲ್ಲಿ ಕೊಡಲಾಗಿದೆ.

## ಮೃತ್ಯುಹರ ಸ್ತೋತ್ರಮ್

ಅಸ್ಯಶ್ರೀ ಮೃತ್ಯುಹರ ಸ್ತೋತ್ರಮಂತ್ರಸ್ಯ ಮಾರ್ಕಂಡೇಯ ಋಷಿಃ । ಅನುಷ್ಟುಪ್ ಛಂದಃ । ವರಾಹನೃಸಿಂಹೋ ದೇವತಾ । ಅಕಾಲಮೃತ್ಯು ಪರಿಹಾರಾರ್ಥೇ ಜಪೇ ವಿನಿಯೋಗಃ ॥

**ಮಾರ್ಕಂಡೇಯ ಉವಾಚ :**

ನಾರಾಯಣಂ ಸಹಸ್ರಾಕ್ಷಂ ಪದ್ಮನಾಭಂ ಪುರಾತನಮ್ ।
ಪ್ರಪನ್ನೋಽಸ್ಮಿ ಹೃಷೀಕೇಶಂ ಕಿಂ ನೋ ಮೃತ್ಯುಃ ಕರಿಷ್ಯತಿ ॥ 1 ॥

ಗೋವಿಂದಂ ಪುಂಡರೀಕಾಕ್ಷಂ ಅನಂತಮಜಮವ್ಯಯಮ್ ।
ಕೇಶವಂ ಚ ಪ್ರಪನ್ನೋಽಸ್ಮಿ ಕಿಂ ನೋ ಮೃತ್ಯುಃ ಕರಿಷ್ಯತಿ ॥ 2 ॥

ವಾಸುದೇವಂ ಜಗದ್ಯೋನಿಂ ಭಾನುವರ್ಣಮತೀಂದ್ರಿಯಮ್ ।
ದಾಮೋದರಂ ಪ್ರಪನ್ನೋಽಸ್ಮಿ ಕಿಂ ನೋ ಮೃತ್ಯುಃ ಕರಿಷ್ಯತಿ ॥ 3 ॥

ವರಾಹಂ ವಾಮನಂ ವಿಷ್ಣುಂ ನಾರಸಿಂಹಂ ಜನಾರ್ದನಮ್ ।
ಅಧೋಕ್ಷಜಂ ಪ್ರಪನ್ನೋಽಸ್ಮಿ ಕಿಂ ನೋ ಮೃತ್ಯುಃ ಕರಿಷ್ಯತಿ ॥ 4 ॥

ಶಂಖಚಕ್ರಧರಂ ದೇವಂ ಛಂದೋರೂಪಿಣಮವ್ಯಯಮ್ ।
ನಾರಸಿಂಹಂ ಪ್ರಪನ್ನೋಽಸ್ಮಿ ಕಿಂ ನೋ ಮೃತ್ಯುಃ ಕರಿಷ್ಯತಿ ॥ 5 ॥

ಪುರುಷಂ ಪುಷ್ಕಲಂ ಪುಣ್ಯಂ ಕ್ಷೇತ್ರಬೀಜಂ ಜಗತ್ಪತಿಮ್ ।
ಲೋಕನಾಥಂ ಪ್ರಪನ್ನೋಽಸ್ಮಿ ಕಿಂ ನೋ ಮೃತ್ಯುಃ ಕರಿಷ್ಯತಿ ॥ 6 ॥

ಭೂತಾತ್ಮಾನಂ ಮಹಾತ್ಮಾನಂ ಯಜ್ಞಯೋನಿಮಯೋನಿಜಮ್।
ವಿಶ್ವರೂಪಂ ಪ್ರಪನ್ನೋಽಸ್ಮಿ ಕಿಂ ನೋ ಮೃತ್ಯುಃ ಕರಿಷ್ಯತಿ ॥ 7 ॥

ಸಹಸ್ರಶೀರ್ಷಂ ದೇವೇಶಂ ವ್ಯಕ್ತಾವ್ಯಕ್ತಂ ಸನಾತನಮ್ ।
ಮಹಾಯೋಗಂ ಪ್ರಪನ್ನೋಽಸ್ಮಿ ಕಿಂ ನೋ ಮೃತ್ಯುಃ ಕರಿಷ್ಯತಿ ॥ 8 ॥

ಇತ್ಯುದೀರಿತಮಾಕರ್ಣ್ಯ ಸ್ತೋತ್ರಂ ತಸ್ಯ ಮಹಾತ್ಮನಃ ।
ಅಪಯಾತಸ್ತತೋ ಮೃತ್ಯುರ್ವಿಷ್ಣುದೂತೈಶ್ಚ ಪೀಡಿತಃ ॥ 9 ॥

ಇತಿ ತೇನ ಜಿತೊ ಮೃತ್ಯುರ್ಮಾರ್ಕಂಡೇಯೇನ ಧೀಮತಾ ।
ಪ್ರಸನ್ನೇ ಪುಂಡರೀಕಾಕ್ಷೇ ನೃಸಿಂಹೇ ನಾಸ್ತಿ ದುರ್ಲಭಮ್ ॥ 10 ॥

ಸ್ತುತ್ಯಷ್ಟಕಮಿದಂ ಪುಣ್ಯಂ ಮೃತ್ಯುಪ್ರಶಮನಂ ಶುಭಮ್ ।
ಮಾರ್ಕಂಡೇಯ ಹಿತಾರ್ಥಾಯ ಸ್ವಯಂ ವಿಷ್ಣುರವಾಚಯತ್ ॥ 11 ॥

ಯ ಇದಂ ಪಠತೇ ಭಕ್ತ್ಯಾ ತ್ರಿಕಾಲೇ ನಿಯತಃ ಶುಚಿಃ ।
ನಾಕಾಲೇ ತಸ್ಯ ಮೃತ್ಯುಃ ಸ್ಯಾತ್ ನರಸ್ಯಾಚ್ಯುತಚೇತಸಃ ॥ 12 ॥

ಹೃತ್ಪದ್ಮಮಧ್ಯೇ ಪುರುಷಂ ಪುರಾಣಮ್
ನಾರಾಯಣಂ ಶಾಶ್ವತಮಾದಿದೇವಮ್ ।
ಸಂಚಿಂತ್ಯ ಸೂರ್ಯಾದಧಿ ರಾಜಮಾನಂ
ಮೃತ್ಯುಂ ಸ ಯೋಗೀ ಜಿತವಾನ್ ಸದಾ ಸ್ಯಾತ್ ॥ 13 ॥

ಮೃತ್ಯುಹರಸ್ತೋತ್ರಂ ಸಂಪೂರ್ಣಮ್ ॥

* * *

# ಸಹಸ್ರಚಂದ್ರದರ್ಶನ ಶಾಂತಿ

'ಸಹಸ್ರಚಂದ್ರದರ್ಶನ' ಎಂಬ ಶಬ್ದಕ್ಕಿಂತ ಹೆಚ್ಚಾಗಿ 'ಸಹಸ್ರ ಚಂದ್ರದರ್ಶ' ಎಂಬ ಶಬ್ದವನ್ನು ಶಾಸ್ತ್ರ ಬಳಸಿದೆ. 'ದರ್ಶ' ಎಂದರೆ ಅಮಾವಾಸ್ಯೆ. ಜೀವನದಲ್ಲಿ ಒಂದು ಸಾವಿರ ಅಮಾವಾಸ್ಯೆಗಳ ನಂತರದ ಉದಿಸಿದ ಪ್ರತಿಪಚ್ಚಂದ್ರನನ್ನು ದರ್ಶನ ಮಾಡಿದವನಿಗೆ ಸಹಸ್ರ ಚಂದ್ರದರ್ಶನಶಾಂತಿ ಎಂಬ ಅಭ್ಯುದಯ ಕರ್ಮವನ್ನು ಪೌರೋಹಿತ್ಯ ಗ್ರಂಥಗಳು ವಿವರಿಸಿವೆ.

ಜೀವಮಾನದಲ್ಲಿ ಒಂದು ಸಾವಿರ ಹುಣ್ಣಿಮೆಗಳು ಸಂದಾಗ ಈ ಶಾಂತಿ ಎಂಬ ವಿವರಣೆಯೂ ಇದೆ. ಇಲ್ಲಿ ಚಂದ್ರದರ್ಶನ ಎಂದರೆ ಪೂರ್ಣಚಂದ್ರದರ್ಶನ ಎಂದರ್ಥ.

### ಶಾಂತಿಕಾಲ

ಸಹಸ್ರಚಂದ್ರದರ್ಶನವು ಪೂರ್ತಿಯಾಗುವುದು ಯಾವಾಗ? ಎಂಬ ಬಗ್ಗೆ ಅರ್ಥಾತ್ ಈ ಶಾಂತಿಯನ್ನು ನಡೆಸಬೇಕಾದ ಕಾಲದ ಬಗ್ಗೆ ಮೂರು ಅಭಿಪ್ರಾಯಗಳಿವೆ.

1. ಎಂಭತ್ತು ವರ್ಷ ತುಂಬಿ ಹತ್ತು ತಿಂಗಳಾದಾಗ
2. ಎಂಭತ್ತು ವರ್ಷ ತುಂಬಿದಾಗ
3. ಎಂಭತ್ತೊಂದು ವರ್ಷ ತುಂಬಿದಾಗ

ಎಂಭತ್ತು ವರ್ಷ ಹತ್ತುತಿಂಗಳುಗಳಿಗೆ ಸರಿಯಾಗಿ 1,000 ಹುಣ್ಣಿಮೆಗಳು ಸಲ್ಲುತ್ತವೆ. ಹೇಗೆಂದರೆ ವರ್ಷಕ್ಕೆ 12ರಂತೆ 80 ವರ್ಷಕ್ಕೆ (80X12 = 960) ಹುಣ್ಣಿಮೆಗಳು 960. ಮೇಲೆ ಹತ್ತು ತಿಂಗಳು ಸೇರಿದಾಗ 970. ಇನ್ನು 30 ಅಧಿಕಮಾಸಗಳು.

ಮೂವತ್ತಮೂರು ತಿಂಗಳುಗಳಿಗೆ ಒಂದು ಅಧಿಕಮಾಸ ಬೀಳುತ್ತದೆ. ಇನ್ನೂ ಕರಾರುವಾಕ್ಕಾಗಿ ಹೇಳುವುದಾದರೆ, ವಸಿಷ್ಠರ ಮಾತಿನಂತೆ

**ದ್ವಾತ್ರಿಂಶದ್ಭಿರ್ಮಿತೈರ್ಮಾಸೈರ್ದಿನೈಃ ಷೋಡಶಭಿಸ್ತಥಾ ।**
**ಘಟಿಕಾನಾಂ ಚತುಷ್ಕೇಣ ಪತತ್ಯಧಿಕಮಾಸಕಃ ॥**

32ತಿಂಗಳು 16ದಿನ 4ಘಳಿಗೆಗೊಂದು ಅಧಿಕಮಾಸ ಬೀಳುತ್ತದೆ. ಹಾಗಾಗಿ 970 ತಿಂಗಳಿಗೆ (970/32.5=29.9) ಮೂವತ್ತು ಅಧಿಕ ಮಾಸಗಳು ಒದಗುತ್ತವೆ. ಹೀಗೆ 80ವರ್ಷ 10ತಿಂಗಳು ಪೂರ್ತಿಯಾದಾಗ (970+30) 1000ಹುಣ್ಣಿಮೆಗಳು ಭರ್ತಿಯಾಗಿರುತ್ತವೆ.

80ವರ್ಷ ಹತ್ತು ತಿಂಗಳು ಭರ್ತಿಯಾಗಿ ಮುಂದಿನ 6 ತಿಂಗಳ ಒಳಗಾಗಿ ಸಹಸ್ರಚಂದ್ರದರ್ಶನಶಾಂತಿಯನ್ನು ನಡೆಸುವುದು ಹೆಚ್ಚು ಪ್ರಶಸ್ತ. ಹಾಗಾಗಿಯೇ ಶೌನಕೀಯಕಾರಿಕೆಯಲ್ಲಿ

**ಆಶೀತ್ಯೇಕಾಬ್ದವರ್ಷೇ ಸ್ಯಾದಧಿಮಾಸೈಃ ಸಮನ್ವಿತೇ ।**
**ಸಹಸ್ರಸೋಮದರ್ಶಃ ಸ್ಯಾತ್ ತದೂರ್ಧ್ವಂ ಪುಣ್ಯಕೃತ್ ದ್ವಿಜಃ ॥**

81ನೇ ವರ್ಷದಲ್ಲಿ ಸಹಸ್ರಚಂದ್ರದರ್ಶ ಪೂರ್ಣವಾಗುವುದು. ಇನ್ನೂ ಹೆಚ್ಚು ಬದುಕುವವರು ಪುಣ್ಯಶಾಲಿಗಳು ಎಂದಿದೆ.

ಇನ್ನೂ ಮುಂದುವರಿಸುತ್ತಾ ಶೌನಕರು, 'ಅಥೋತ್ತರಾಯಣೇ ಪುಣ್ಯೇ ಪೂರ್ಣಪಕ್ಷೇ ಶುಭೇ ದಿನೇ' ಎನ್ನುತ್ತಾ 80 ವರ್ಷ 10 ತಿಂಗಳ ನಂತರ ಉತ್ತರಾಯಣದ ಶುಕ್ಲಪಕ್ಷದ ಶುಭದಿನದಲ್ಲಿ ಶಾಂತಿ – ವಿಧಿಯನ್ನು

ನಡೆಸಬೇಕೆನ್ನುತ್ತಾರೆ. ಬೋಧಾಯನರೂ ಕೂಡ **'ಸಹಸ್ರ -ಚಂದ್ರದರ್ಶಿನ ಆಪೂರ್ಯಮಾಣಪಕ್ಷೇ ಉದಗಯನೇ ಪುಣ್ಯೇ ನಕ್ಷತ್ರೇ'** ಎಂದೇ ಪ್ರಯೋಗವನ್ನು ಆರಂಭಿಸಿದ್ದಾರೆ.

ಒಟ್ಟಿನಲ್ಲಿ 80 ವರ್ಷ 10 ತಿಂಗಳು ಪೂರ್ತಿಯಾದ ಮೇಲೆಯೇ ಸಹಸ್ರ ಚಂದ್ರದರ್ಶನ ಶಾಂತಿ. ಉತ್ತರಾಯಣದಲ್ಲಿ ಒದಗಿದರೆ ಆಗಲೇ ಶಾಂತಿ. 80 ವರ್ಷ 10 ತಿಂಗಳು ಪೂರ್ಣವಾದಾಗ ದಕ್ಷಿಣಾಯನ ನಡೆಯುತ್ತಿದ್ದರೆ ಉತ್ತರಾಯಣಕ್ಕೆ ಕಾದು ಶುಕ್ಲಪಕ್ಷದ ಶುಭನಕ್ಷತ್ರದಂದು ಶಾಂತಿಯನ್ನು ನಡೆಸಬೇಕು.

**ಕೆಲವರ ಪಕ್ಷ:**

80 ವರ್ಷ ಪೂರ್ತಿಯಾದೊಡನೇ ಸಹಸ್ರಚಂದ್ರದರ್ಶನ ಎಂಬುದು ಇನ್ನೊಂದು ಪಕ್ಷ. ಆದ್ದರಿಂದಲೇ ಈ ಶಾಂತಿಯನ್ನು 80ನೇ ಶಾಂತಿ (ಅಶೀತಿಶಾಂತಿ) ಎಂದೇ ವ್ಯವಹರಿಸುತ್ತಾರೆ. ಇವರು ಒಂದು ಖಗ್ರಾಸ ಚಂದ್ರಗ್ರಹಣವನ್ನು ಎರಡು ಚಂದ್ರದರ್ಶನ ಎಂದು ಪರಿಗಣಿಸುತ್ತಾರೆ. ಚಂದ್ರದರ್ಶನವೆಂದರೆ ಅಮಾವಾಸ್ಯೆಯ ಮರುದಿನದ ಚಂದ್ರದರ್ಶನ. ಖಗ್ರಾಸ ಗ್ರಹಣದಂದು ಅಮಾವಾಸ್ಯೆಯಂತೆ ಚಂದ್ರನ ಅದರ್ಶನವಾಗಿ ಚಂದ್ರದರ್ಶನವಾಗತೊಡಗುತ್ತದೆ. ಇಂತಹ ಖಗ್ರಾಸ ಚಂದ್ರಗ್ರಹಣಗಳು 80 ವರ್ಷದಲ್ಲಿ ಹತ್ತಾದರೂ ಬರುತ್ತವೆ. ಹಾಗಾಗಿ 80 ವರ್ಷಗಳು ದಾಟಿ 10 ತಿಂಗಳು ಬೇಕಿಲ್ಲ. 80 ವರ್ಷಗಳಿಗೇ ಸಹಸ್ರಚಂದ್ರದರ್ಶನ ವಾಗುತ್ತದೆ ಎಂಬುದೂ ಒಂದು ಪಕ್ಷ. **'ಅಶೀತಿವರ್ಷೇ ಸಂಪೂರ್ಣೇ ಸಹಸ್ರಶಶಿದರ್ಶನೇ'** ಎಂಬಿತ್ಯಾದಿ ಮಾತು ಇವರಿಗೂ ಪ್ರಮಾಣವಾಗ ಬಹುದು. ಹಾಗಾಗಿ 80 ವರ್ಷ ಪೂರ್ಣವಾದೊಡನೆ ಈ ಶಾಂತಿ ನಡೆಸುವ ಸಂಪ್ರದಾಯವೂ ಇದೆ.

ಶೌನಕವಚನವನ್ನು ಅನುಸರಿಸಿ 80 ವರ್ಷ 10 ತಿಂಗಳು ಪೂರ್ಣವಾದ ಮೇಲೆ ಶುಭದಿನದಲ್ಲಿ ಈ ಶಾಂತಿಯ ಆಚರಣೆಯು ಪ್ರಶಸ್ತವೆಂದು ನನ್ನ ಅಭಿಪ್ರಾಯ.

ಸ್ಕಾಂದಪುರಾಣದ ಕೇದಾರಖಂಡದಲ್ಲೂ ಸ್ಕಂದ-ಅಗಸ್ತ್ಯ ಸಂವಾದ ರೂಪದಲ್ಲಿ ಸಹಸ್ರಚಂದ್ರದರ್ಶನ ಶಾಂತಿಯ ಮಹತ್ವವನು ಹೊಗಳಲಾಗಿದೆ. **'ದುರ್ಲಭಂ ಹಿ ಮನುಷ್ಯಾಣಾಮಶೀತ್ಯಾಯುಃ ಕಲೌ ಯುಗೇ'** ಕಲಿಯುಗದಲ್ಲಿ ಮನುಷ್ಯನು 80ಕ್ಕಿಂತ ಹೆಚ್ಚು ಬದುಕುವುದೇ ದುರ್ಲಭವಲ್ಲವೇ? ಅಂತಹ ಯೋಗ ಲಭಿಸಿದಾಗ ಈ ಶಾಂತಿಯ ಅವಕಾಶವನ್ನು ಕೈಚೆಲ್ಲಬಾರದು ಎಂಬ ಸ್ಕಂದನ ಮಾತು ಮನನೀಯವಾಗಿದೆ.

## ಶಾಂತಿವಿಧಿ

ಹೋಮ ಹಾಗೂ ಶತಾಭಿಷೇಕ ವಿಧಿಯನ್ನು ಕಾರಿಕೆಗಳು ವಿಧಿಸಿವೆ. ಶೌನಕೀಯ ಹೀಗೆ ಆರಂಭವಾಗಿದೆ.

**ಶತಾಭಿಷೇಕಂ ವಕ್ಷ್ಯಾಮಿ ಶೌನಕೋಽಹಂ ದ್ವಿಜನ್ಮನಾಮ್ ।**
**ಯದಬ್ದೇ ಚೇಂದುಸಾಹಸ್ರದರ್ಶನಂ ಜಾಯತೇ ನೃಣಾಮ್ ॥**
**ತದೋತ್ತರಾಯಣೇ ಪುಣ್ಯೇ ಪೂರ್ವಪಕ್ಷೇ ಶುಭೇ ದಿನೇ ।**

ಯಾವ ವರ್ಷದಲ್ಲಿ ಮನುಜನಿಗೆ ಸಹಸ್ರಚಂದ್ರದರ್ಶನ ಪೂರ್ತಿ ಯಾಗಿದೆಯೋ (80ವರ್ಷ 10ತಿಂಗಳು ತುಂಬಿದೆಯೋ) ಅದೇ ವರ್ಷದ ಉತ್ತರಾಯಣದ ಶುಭದಿನದಲ್ಲಿ ಶತಾಭಿಷೇಕವನ್ನು ನಡೆಸಬೇಕು.

ಶತಾಭಿಷೇಕವೆಂದರೆ ನೂರು ಕಲಶಗಳ ಸ್ಥಾಪನೆಯೆಂದು ಅರ್ಥ ವಲ್ಲ. 5 ಅಥವಾ 12 ಕಲಶಗಳ ಪ್ರತಿಷ್ಠೆಮಾಡಿ ಬ್ರಹ್ಮ, ವಿಷ್ಣು, ಮಹೇಶ್ವರರನ್ನೂ, ಗ್ರಹ, ನಕ್ಷತ್ರದೇವತೆ, ಇಂದ್ರ, ಚಂದ್ರ, ಸೂರ್ಯರನ್ನು ಆವಾಹಿಸಿ ಶಾಂತಿಮಂತ್ರಗಳನ್ನು ಪಠಿಸುವುದು. ಈ ಮಧ್ಯೆ ಇದೇ ದೇವತೆಗಳಿಗೆ ಆಹುತಿಯನ್ನಿತ್ತು ಶತಮಂತ್ರಗಳಿಂದ ಕಲಶಾಭಿಷೇಕವನ್ನೂ ನಡೆಸುವುದೇ ಶತಾಭಿಷೇಕವಿಧಿ.

**ಹೋಮಮಂತ್ರೈಸ್ತಥಾನ್ಯೈಶ್ಚ ಸೂಕ್ತೇನ ಪುರುಷೇಣ ಚ ।**
**ಅಬ್ಲಿಂಗಾಭಿಃ ಪಾವಮಾನಸೂಕ್ತೈರನ್ಯೈಶ್ಚ ಶಾಂತಿಕೈಃ ॥**

ಎಂಬ ಶೌನಕಕಾರಿಕೆಯಂತೆ ಹೋಮಮಂತ್ರಗಳು – 5, ಗ್ರಹಮಂತ್ರ – 9, ನಕ್ಷತ್ರಮಂತ್ರ – 28, ಪುರುಷಸೂಕ್ತ – 16, ಅಪೋಹಿಷ್ಠಾದಿ – 9, ಪುಣ್ಯಾಹೋಕ್ತ ಪವಮಾನ – 26, ಮೃತ್ಯುಂಜಯ ಶಾಂತಿಮಂತ್ರ – 7, ಈ 100 ಮಂತ್ರಗಳಿಂದ ಕಲಶಾಭಿಷೇಕ ನಡೆಸಬೇಕು. ಸುವರ್ಣಾಭಿಷೇಕವನ್ನು ನಡೆಸುವ ಪದ್ಧತಿಯೂ ಇದೆ.

* ಮಂಗಲದ್ರವ್ಯ ನಿರೀಕ್ಷಣೆಯೂ ಷಷ್ಟಿಪೂರ್ತಿಯಂತೆ ಕರ್ತವ್ಯ.

* ಗಜಾಶ್ವರಥಗಳೊಂದಿಗೆ ಪಲ್ಲಕ್ಕಿಯನ್ನೋ, ಗಜವನ್ನೋ ಏರಿ ಕುಳಿತು, ನಗರಪ್ರದಕ್ಷಿಣೆಯ ವಿಧಿಯೊಂದಿಗೆ ವಾದ್ಯಾದಿಘೋಷದೊಂದಿಗೆ ಉತ್ಸವವನ್ನೂ ಶೌನಕೀಯ ಕಾರಿಕೆ ಹೇಳಿದೆ. ಇಂದಿನ ಕಾಲದಲ್ಲಿ ಈ ವಿಧಿ ಬಿಟ್ಟುಹೋಗಿದೆ.

ಈ ಶಾಂತಿಯ ಆಚರಣೆಯಿಂದ 21 ತಲೆಯ ಪಿತೃಗಳಿಗೆ ಉದ್ಧಾರ. ಇದು ಪಾಪಹಾರಕ. ಶ್ರೇಯಃಕರ.

**ಇದಂ ಧನ್ಯಂ ಯಶಸ್ಯಂ ಚ ಶಾಂತಿಪುಷ್ಟಿಕರಂ ತಥಾ ।**
**ಆಯುಷ್ಯದಂ ಪುತ್ರಕರಂ ಮಹಾಪಾತಕನಾಶನಮ್ ॥**

* * *

# ಶತಮಾನ ಶಾಂತಿ

"ಪುಣ್ಯಜೀವಿಗಳಿಗೆ ಮಾತ್ರ ಲಭ್ಯವಾಗುವ ಜೀವನದ ಎರಡು ಘಟ್ಟಗಳು. ಮೊದಲನೆಯದು ಸಹಸ್ರಮಾಸಗಳ ಜೀವನ. ಎರಡನೆಯದು ನೂರು ಸಂವತ್ಸರಗಳ ಬದುಕು". ಇದರಲ್ಲಿ ಮೊದಲನೆಯದು ಎಂಭತ್ತು ವರ್ಷ ಹತ್ತು ತಿಂಗಳುಗಳಿಗೆ ಲಭ್ಯವಾಗುತ್ತದೆ. ಆ ಕಾಲದಲ್ಲಿ ನಡೆಸುವ ಶಾಂತಿಯನ್ನು ಸಹಸ್ರಚಂದ್ರದರ್ಶನಶಾಂತಿ ಎಂದು ಕರೆಯಲಾಗಿದೆ. ಸ್ಕಾಂದದಲ್ಲಿ ಅಗಸ್ತ್ಯರನ್ನು ಕುರಿತು ಸ್ಕಂದ ಹೇಳುತ್ತಾನೆ

**"ದ್ವಿಜೈರವಶ್ಯಂ ಕರ್ತವ್ಯಂ ಮಾಸಸಾಹಸ್ರಜೀವಿಭಿಃ ।**
**ದುರ್ಲಭಂ ಹಿ ಮನುಷ್ಯಾಣಾಮಶೀತ್ಯಾಯುಃ ಕಲೌ ಯುಗೇ ॥"**

ಸಹಸ್ರ ಮಾಸಗಳಲ್ಲಿ ಜೀವಿಸಿದ ದ್ವಿಜ ಈ ಶತಾಭಿಷೇಕ ವಿಧಿಯನ್ನು ಮಾಡಿಕೊಳ್ಳಬೇಕು. ಮನುಷ್ಯನಿಗೆ ಕಲಿಯುಗದಲ್ಲಿ ಎಂಭತ್ತು ವರ್ಷದ ಜೀವನವೂ ದುರ್ಲಭವಲ್ಲವೇ? ಎಂದು.

ಈ ಸ್ಕಾಂದದಲ್ಲಿ ಎಂಭತ್ತಕ್ಕೆ ಹೇಳಿದ ಶತಾಭಿಷೇಕ ವಿಧಿಯನ್ನೇ ಬೋಧಾಯನರು ಶತಸಂವತ್ಸರ ತುಂಬಿದವರಿಗೂ ಹೇಳಿದ್ದಾರೆ. **"ಅಥಾತಃ ಶತಾಭಿಷೇಕವಿಧಿಂ ವ್ಯಾಖ್ಯಾಸ್ಯಾಮಃ ಶತಸಂವತ್ಸರ ಜೀವಿನಃ ಸಹಸ್ರಚಂದ್ರ-ದರ್ಶಿನಶ್ಚ"** ಹಾಗಾಗಿ ಎಂಭತ್ತೊಂದನೇ ವರ್ಷದ ಕೊನೆಯಲ್ಲಿ ನಡೆಸಿದ ವಿಧಿಯನ್ನೇ ಶತಸಂವತ್ಸರ ಜೀವಿಗಳು ಪುನಃ ನಡೆಸಬೇಕು.

ಶತಮಾನ ಶಾಂತಿಗೆ ಪ್ರಶಸ್ತ ಕಾಲ ಯಾವುದು? ಎಂಬುದರ ಬಗೆಗೆ ನಾಲ್ಕು ಅಭಿಪ್ರಾಯಗಳಿವೆ.

1. ನೂರುವರ್ಷ ತುಂಬಿ ನೂರಾ ಒಂದನೇ ಜನ್ಮದಿನ.
2. ತೊಂಭತ್ತೊಂಭತ್ತು ಭರ್ತಿಯಾಗಿ ನೂರನೇ ಜನ್ಮದಿನ.
3. ತೊಂಭತ್ತೊಂಭತ್ತು ತುಂಬಿ ನೂರು ಮುಗಿಯುವದರೊಳಗೆ ಒದಗುವ ಉತ್ತರಾಯಣದಲ್ಲಿ ಶುಕ್ಲಪಕ್ಷದ ಯಾವುದೇ ಜನ್ಮನಕ್ಷತ್ರ.
4. ಅಧಿಕಮಾಸಗಳನ್ನು ಬಿಟ್ಟು ಲೆಕ್ಕ ಹಾಕಿದಾಗ ಒದಗುವ ನೂರು ವರ್ಷಗಳಲ್ಲಿ ಅಂದರೆ 1,200 ಮಾಸಗಳ ಜೀವನ ಪೂರ್ಣವಾದಾಗ ಅರ್ಥಾತ್ ತೊಂಭತ್ತಾರು ತುಂಬಿ ತೊಂಭತ್ತೇಳನೇ ವರ್ಷದ ಆದಿಯ ಜನ್ಮದಿನ.

ಈ ನಾಲ್ಕು ಅಭಿಪ್ರಾಯಗಳಲ್ಲಿ ಯಾವ ಪಕ್ಷವನ್ನೂ ಪೌರೋಹಿತ್ಯ ಗ್ರಂಥಗಳು ಪುಷ್ಟೀಕರಿಸಿಲ್ಲ. ಅಥವಾ ನಿರಾಕರಿಸಿಲ್ಲ. ಹಾಗಿದ್ದು ಹೆಚ್ಚು ಚಾಲ್ತಿಯಲ್ಲಿರುವ ಪಕ್ಷವೆಂದರೆ ಎರಡನೆಯದು. ಅಂದರೆ ತೊಂಭತ್ತೊಂಭತ್ತು ಭರ್ತಿಯಾಗಿ ನೂರನೇ ಜನ್ಮದಿನದಂದು ಶತಮಾನಶಾಂತಿ ನಡೆಸುವುದು. ಇದನ್ನೇ ಅನುಸರಿಸುವುದು ಹೆಚ್ಚು ಯುಕ್ತವಾಗಿದೆ.

ಇಲ್ಲಿ ಹೇಳಿದ ಜನ್ಮದಿನವೆಂದರೆ ಜನ್ಮಮಾಸದ ಜನ್ಮನಕ್ಷತ್ರ. ಜನ್ಮ ಮಾಸದ ಜನ್ಮತಿಥಿಯನ್ನು ಪರಿಗ್ರಹಿಸುವ ಕ್ರಮವೂ ಕೆಲವೆಡೆ ಇದೆ. ಈ ಜನ್ಮದಿನವು ಏಕಾದಶೀ ಮುಂತಾದ ಅನನುಕೂಲದ ದಿನದಂದು ಒದಗಿದರೆ ಸನಿಹದ ತಾರಾನುಕೂಲ್ಯವಿರುವ ಶುಭದಿನದಂದು ಶತಮಾನ ಶಾಂತಿಯು ಕರ್ತವ್ಯ.

**ಶಾಂತಿವಿಧಿ**

ಶಾಂತಿಯ ಹಿಂದಿನ ದಿನ ಪ್ರಾತಃ ಪುಣ್ಯಾಹವಾಚನ ನಡೆಸಿ ಪಂಚಗವ್ಯ ಪ್ರಾಶನವನ್ನು ಮಾಡುವುದು. ನವಗ್ರಹಗಳನ್ನು ಆರಾಧಿಸಿ, ಗ್ರಹಧಾನ್ಯದಾನದೊಂದಿಗೆ ಅನ್ನದಾನವನ್ನೂ ನಡೆಸಬೇಕು. ಇಂದೇ ಪ್ರಾತಃ

ಶುಭಲಕ್ಷಣೋಪೇತಗಳಾದ ಐದು ಕಲಶಗಳನ್ನು ಸ್ಥಾಪಿಸಬೇಕು. ಮಧ್ಯೆ ಬಿಂದಿಗೆಯಲ್ಲಿ ಬ್ರಹ್ಮನನ್ನು ಪೂರ್ವಾದಿ ದಿಕ್ಕುಗಳ ನಾಲ್ಕು ಕಲಶಗಳಲ್ಲಿ ಪ್ರಜಾಪತಿ, ಪರಮೇಷ್ಠೀ, ಚತುರ್ಮುಖ, ಹಿರಣ್ಯಗರ್ಭ ಎಂಬ ಹೆಸರುಗಳಿಂದ ಆವಾಹಿಸಬೇಕು. ಮಧ್ಯಕಲಶದಲ್ಲಿ ಇಂದ್ರಾದಿ ದಿಕ್ಪಾಲಕರನ್ನೂ ಜನ್ಮನಕ್ಷತ್ರ ದೇವತೆಯನ್ನೂ ಆವಾಹಿಸಿ ಪೂಜಿಸಬೇಕು. ಯಥಾ ಸಂಭವ ಶಾಂತಿ ಮಂತ್ರಗಳಿಂದ ಕಲಶಗಳನ್ನು ಅಭಿಮಂತ್ರಿಸಬೇಕು.

ಶಾಂತಿಯ ದಿನದಂದು ಪ್ರಾತಃ ಕಲಶಗಳನ್ನು ಮತ್ತೆ ಪೂಜಿಸಿ ಶತಮಾನಶಾಂತಿ ಹೋಮವನ್ನು ನಡೆಸಬೇಕು. ಇಲ್ಲಿ 'ಬ್ರಹ್ಮ ಜಜ್ಞಾನಂ' ಎಂಬ ಯಾಜುಷ ಮಂತ್ರದಿಂದಲೂ 'ಅಗ್ನಿರಾಯುಷ್ಮಾನ್' ಎಂಬ ಐದು ಮಂತ್ರಗಳಿಂದಲೂ ಆಹುತಿಪ್ರದಾನದ ಪ್ರಕ್ರಿಯೆಯಿದೆ.

ಹೋಮ ಮುಗಿದ ಮೇಲೆ ಕಲಶ ಜಲದಿಂದ ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳದಿಂದ ಯುತನಾದ ಶತಾಯುಷಿಗೆ ಅಭಿಷೇಕದ ಪ್ರಕ್ರಿಯೆಯಿದೆ. ಅಭಿಷೇಕಾನಂತರ ಅಲಂಕೃತನಾದ ಶತಾಯುಷಿ ಕಂಚಿನ ಪಾತ್ರೆಯಲ್ಲಿನ ತುಪ್ಪದಲ್ಲಿ ತನ್ನ ಮುಖಚ್ಛಾಯೆಯನ್ನು ನಿರೀಕ್ಷಿಸಿ ನಿರೀಕ್ಷಿತಾಜ್ಯವನ್ನು ಶ್ರೋತ್ರಿಯನಿಗೆ ದಾನವನ್ನೀಯುತ್ತಾನೆ.

ಮುಂದೆ ಸಹಸ್ರಚಂದ್ರದರ್ಶನ ಶಾಂತಿಯಲ್ಲಿ ನಡೆಸಿದಂತೆ ರಥ-ಗಜ-ಅಶ್ವಾದ್ಯಾರೋಹಣದೊಂದಿಗೆ ಗ್ರಾಮ ಪ್ರದಕ್ಷಿಣೆಯನ್ನು ನಡೆಸುವ ವಿಧಿ ಬೋಧಾಯನರ ನಿರೂಪಣೆಯಲ್ಲಿದೆ. 'ಅಥ ರಥಮಾರುಹ್ಯ ಗ್ರಾಮಂ ಪ್ರದಕ್ಷಿಣೀಕೃತ್ಯ ದುಂದುಭಿಶಬ್ದೇನ ಸ್ವಸ್ತಿಸೂಕ್ತೇನ'.

ಈ ಶಾಂತಿಯನ್ನು ನಡೆಸಿಕೊಂಡವ ಪುಣ್ಯಜೀವಿ. ಅವನಿಗೆ ಅಶ್ವಮೇಧದ ಫಲ. ಅಲ್ಲದೇ

**ತಸ್ಯ ಪುತ್ರಾಶ್ಚ ಪೌತ್ರಾಶ್ಚ ನಪ್ತಾರಸ್ತತ್ಸುತಾ ಅಪಿ ।**
**ದೀರ್ಘಾಯುಷೋ ಭವಿಷ್ಯಂತಿ ಧನಧಾನ್ಯಸಮನ್ವಿತಾಃ ॥**

ಅವನ ಪುತ್ರರು, ಮೊಮ್ಮಕ್ಕಳು, ಮರಿಮಕ್ಕಳು ಹಾಗೂ ಅವರ ಮಕ್ಕಳೂ ದೀರ್ಘಾಯುಷಿಗಳಾಗಿ ಧನಧಾನ್ಯ ಸಮೃದ್ಧಿಯಿಂದ ಸಜ್ಜನಿಕೆಯ ಜೀವನವನ್ನು ನಡೆಸುವಂತಾಗುತ್ತಾರೆ ಎಂಬ ಫಲವನ್ನು ಸ್ಕಾಂದವಚನವು ಹೇಳಿದೆ. ಇದರಿಂದ ತಿಳಿಯುವ ವಿಷಯ ಈ ಶತಮಾನ ಶಾಂತಿಯನ್ನು ಮಕ್ಕಳೇ ಮೊದಲಾದ ನಾಲ್ಕು ತಲೆಯವರೂ ಸೇರಿ ಸಂಭ್ರಮದಿಂದ ಭಾಗವಹಿಸಿ ಶತಾಯುಷಿ ಹಿರಿಯರಿಗೆ ಸುವರ್ಣಾಭಿಷೇಕವನ್ನು ಮಾಡಿ ಆಶೀರ್ವಾದ ಪಡೆಯಬೇಕು. ಅದರಿಂದ ತಮಗೆ ಶ್ರೇಯಃ ಪ್ರಾಪ್ತಿಯಿದೆ ಎಂಬುದು.

* * *

# ಆಯುಷ್ಯಹೋಮ (ಜನ್ಮದಿನದ ಆಚರಣೆ)

"ಜನ್ಮದಿನದಂದು ಆಯುಷ್ಯವೃದ್ಧಿಗಾಗಿ ನಡೆಸುವ ಹೋಮ ಆಯುಷ್ಯಹೋಮ". ಆಯುಷ್ಯಹೋಮವು ನಾಲ್ಕು ಬಗೆ. ಧಾನ್ವಂತರ ದೂರ್ವಾಯುಷ್ಯಹೋಮ. ದೂರ್ವಾಯುಷ್ಯಚರುಹೋಮ, ಮೃತ್ಯುಂಜಯ ಹೋಮ, ತ್ರ್ಯಂಬಕಮಂತ್ರಹೋಮ ಎಂಬುದಾಗಿ. ಜನ್ಮದಿನದಂದು ಆಯುಷ್ಯವೃದ್ಧಿಗಾಗಿ ಧನ್ವಂತರಿ ಹೋಮವನ್ನು ನಡೆಸುವ ಬಗೆಯನ್ನು ಶ್ರೀಮಧ್ವಾಚಾರ್ಯರು ತಿಳಿಸಿದ್ದಾರೆ

**ಆಯುರ್ವಿವೃದ್ಧಯೇ ನಿತ್ಯಂ ಜನ್ಮನಕ್ಷತ್ರ ಏವ ವಾ ।**
**ಚತುಶ್ಚತುರ್ಭಿರ್ದೂರ್ವಾಭಿಃ ಕ್ಷೀರಾಜ್ಯಾಕ್ತಾಭಿರಿಷ್ಯತೇ ॥**

**(ತಂತ್ರಸಾರಸಂಗ್ರಹ 4–110)**

ಪ್ರತಿದಿನವೂ ಗರಿಕೆಯಿಂದ ಧನ್ವಂತರಿ ಹೋಮ ನಡೆಸಿ. ಇದು ಆಯುರ್ವೃದ್ಧಿಕರ. ತಿಂಗಳಿಗೊಮ್ಮೆ ಬರುವ ಜನ್ಮನಕ್ಷತ್ರದಂದು ಈ ಹೋಮ ನಡೆಸಿ, ಅದು ಸಾಧ್ಯವಾಗದಾದರೆ ವರ್ಷಕ್ಕೊಮ್ಮೆ ಜನ್ಮಮಾಸದ ಜನ್ಮ ನಕ್ಷತ್ರದಂದಾದರೂ ಈ ಹೋಮವನ್ನು ಮಾಡಿ, ಆಯುರ್ವೃದ್ಧಿಗಾಗಿ ನಡೆಸುವ ಈ ಧನ್ವಂತರಿ ಹೋಮದಲ್ಲಿ ಆಹುತಿದ್ರವ್ಯ ಗರಿಕೆ.

ದೂರ್ವಾಹುತಿಯನ್ನು ನೀಡುವಾಗ ಒಂದು ಆಹುತಿಗೆ ನಾಲ್ಕು ಗರಿಕೆಗಳು. ಅವುಗಳನ್ನು ಹಾಲು ತುಪ್ಪಗಳಲ್ಲಿ ಅದ್ದಿ ಆಹುತಿಯನ್ನು ನೀಡಬೇಕು.

## ಜನ್ಮದಿನವೆಂದರೆ :

ಆಯುಷ್ಯ ಹೋಮಕ್ಕೆ ವಿಹಿತಕಾಲ ಜನ್ಮದಿನ. ಇದು ಕ್ಯಾಲೆಂಡರ್‌ನ ದಿನಾಂಕವಲ್ಲ. ಪಂಚಾಂಗದ ಪ್ರಕಾರ ಜನ್ಮ ಮಾಸದ ಜನ್ಮನಕ್ಷತ್ರ ಅಥವಾ ಜನ್ಮತಿಥಿ. ಇದರಲ್ಲಿ ಜನ್ಮತಿಥಿಯಂದು ಜನ್ಮದಿನವನ್ನು ಆಚರಿಸುವ ಕ್ರಮ ಕೆಲವೇ ಕೆಲವು ಕಡೆ ಇದೆ. ಜನ್ಮನಕ್ಷತ್ರವನ್ನು ಜನ್ಮದಿನವಾಗಿ ಆಚರಿಸುವುದು ಹೆಚ್ಚು ಕಡೆ ಚಾಲ್ತಿಯಲ್ಲಿದೆ. "ಜನ್ಮರ್ಕ್ಷಮ್ ಜನ್ಮಮಾಸಶ್ಚ(ವಾರಶ್ಚ) ಪರ್ವಕಾಲಃ ಸದಾ ಸ್ಮೃತಃ" ಎಂಬ ಮಾತಿನಂತೆ ಜನ್ಮನಕ್ಷತ್ರ ಜನ್ಮಮಾಸಗಳು ಹಾಗೂ ಜನ್ಮವಾರ ಪರಮಪರ್ವಕಾಲವಾಗಿದೆ. ಈ ದಿನ ನಡೆಸುವ ಜಪ-ಹೋಮ ದಾನಗಳು ಅತಿಶಯ ಫಲದಾಯಕಗಳು.

ಆಚಾರ್ಯ ಮಧ್ವರು 'ಜನ್ಮನಕ್ಷತ್ರ ಏವ ವಾ' ಎಂದು ಜನ್ಮನಕ್ಷತ್ರ ದಂದು ಆಯುಷ್ಯ ಹೋಮವನ್ನು ವಿಧಿಸುತ್ತಾ ಜನ್ಮನಕ್ಷತ್ರದಂದು ಜನ್ಮದಿನದ ಆಚರಣೆಯನ್ನು ಅನುಮತಿಸಿದ್ದಾರೆ. ಜನ್ಮದಿನದ ಆಚರಣೆಯಲ್ಲಿ ಜನ್ಮನಕ್ಷತ್ರದ ಪೂಜೆಯನ್ನು ವಿಧಿಸಿರುವುದೂ ಜನ್ಮನಕ್ಷತ್ರದಂದು ಜನ್ಮದಿನದ ಆಚರಣೆಗೆ ಗಮಕವಾಗಿದೆ. 'ವರ್ಧಂತಿಗೆ ನಕ್ಷತ್ರ, ಶ್ರಾದ್ಧಕ್ಕೆ ತಿಥಿ' ಎಂಬ ಗಾದೆಯೂ ಇದೇ ಅಭಿಪ್ರಾಯದಲ್ಲಿದೆ. ಪ್ರಯೋಗಪಾರಿಜಾತಾದಿ ಪ್ರಯೋಗಶಾಸ್ತ್ರಗಳೂ ವರ್ಧಾಪನ ವಿಧಿಯನ್ನು ಹೇಳುತ್ತಾ 'ಅಥ ಸ್ವಜನ್ಮನಕ್ಷತ್ರೇ' ಎಂದೇ ಆರಂಭಿಸುತ್ತಿವೆ.

ಹೀಗಿದ್ದೂ ಜನ್ಮತಿಥಿಯಲ್ಲಿ ಆಚರಿಸುವ ಕೆಲವರ ಪದ್ಧತಿಗೆ ಧರ್ಮ ಸಿಂಧುವಿನ ವಚನವು ಕಾರಣವಾಗಿದೆ. ಅಲ್ಲಿ ವರ್ಧಾಪನವಿಧಿಯನ್ನು ಹೇಳುತ್ತಾ

**"ಸ ಚ ವರ್ಷಪರ್ಯಂತಂ ಪ್ರತಿಮಾಸಂ ಜನ್ಮತಿಥೌ ಕಾರ್ಯಃ ।**
**ವರ್ಷೋತ್ತರಂ ಪ್ರತ್ಯಬ್ದಂ ಜನ್ಮತಿಥೌ ಕಾರ್ಯಃ ।**
**ತಿಥಿದ್ವೈಧೇ ಯತ್ರ ಜನ್ಮರ್ಕ್ಷಯೋಗಃ ಸಾ ಗ್ರಾಹ್ಯಾ ॥"**

ಎನ್ನುತ್ತಾ ಜನ್ಮತಿಥಿಯಲ್ಲಿ ಜನ್ಮದಿನದ ಆಚರಣೆಯನ್ನು ಹೇಳಿದ್ದಾರೆ.

ಜನ್ಮ ಮಾಸದ ಜನ್ಮನಕ್ಷತ್ರವು ಗ್ರಾಹ್ಯ ಎಂಬ ಸಾರ್ವತ್ರಿಕ ಪಕ್ಷವನ್ನು ಇಟ್ಟುಕೊಳ್ಳೋಣ. ಇಲ್ಲಿ ಜನ್ಮಮಾಸವೆಂದರೆ ಸೌರಪಕ್ಷದಲ್ಲಿ ಮೇಷ ವೃಷಭಾದಿ ಲೆಕ್ಕಾಚಾರದ ಜನ್ಮಮಾಸ. ಚಾಂದ್ರಮಾಸ ಪಕ್ಷದಲ್ಲಿ ಚೈತ್ರಾದಿಗಳು. ಈ ಮಾಸದ ಜನ್ಮನಕ್ಷತ್ರವು ಏಕಾದಶಿಯಂದು ಅಥವಾ ಪಿತೃತಿಥಿಯಂದು ಬಂದರೆ ಮಾರನೆಯ ದಿನದಂದು ಆಯುಷ್ಯ ಹೋಮಾದಿಗಳ ಆಚರಣೆ. ವರ್ಧಾಪನ ವಿಧಿಯನ್ನು ಮಾತೃಪಿತೃ ತಿಥಿಯಂದೂ ಆಚರಿಸಬಹುದು. ಅದು ನಿತ್ಯಕರ್ಮ. ಸಂಧ್ಯೆಯಂತೆ.

## ದೂರ್ವಾಯುಷ್ಯ ಹೋಮ

ತ್ರಿಮಧುರಾಕ್ತ(ಜೇನು-ತುಪ್ಪ-ಮೊಸರುಗಳಲ್ಲಿ ಅದ್ದಿದ) ಗರಿಕೆಯಿಂದ ಮೃತ್ಯುಂಜಯನಿಗೆ ಆಹುತಿ ನೀಡುವ ಆಯುಷ್ಯಹೋಮವೂ ಪ್ರಸಿದ್ಧವಿದೆ.

**ಮಧ್ವಾಜ್ಯದಧಿಸಂಯುಕ್ತ ದೂರ್ವಾ ಮೃತ್ಯುಂಜಯೇನ ತು ।**
**ಜುಹುಯಾಚ್ಚ ಸಹಸ್ರಂ ವಾ ಅಷ್ಟಾವಿಂಶತಿಮಾಹುತಿಃ ॥**

**(ಪ್ರಯೋಗಪಾರಿಜಾತ)**

ಕಹೋಳ ವಾಮದೇವಾದಿಗಳು ಶಿವ ಮಂತ್ರಗಳನ್ನು ಸಾಕ್ಷಾತ್ಕರಿಸಿ ಕೊಂಡ ಉಪಾಸಕರು. ಮೃತ್ಯುಂಜಯ ಮಂತ್ರವನ್ನು ಕಂಡವನು ಕಹೋಳ ಋಷಿ. ಇಂದ್ರನ ಸಭೆಯಲ್ಲೂ ಇದ್ದು ಶಿವನ ವೈಭವವನ್ನು ಸಾರಿದ ಕಹೋಳನ ಬಗ್ಗೆ ಮಹಾಭಾರತದಲ್ಲಿ ಉಲ್ಲೇಖವಿದೆ. ಕಹೋಳ ದೃಷ್ಟವಾದ ಮೃತ್ಯುಂಜಯಮಂತ್ರದಿಂದ 1000, 108, 28 ಮುಂತಾದ ಅಭಿಲಷಿತ ಸಂಖ್ಯೆಯ ಆಹುತಿ ದಾನವುಳ್ಳ ಆಯುಷ್ಯಹೋಮವನ್ನು ಜನ್ಮದಿನದಂದು ವಿಧಿಸಿದೆ. ಆಹುತಿಗೆ ದ್ರವ್ಯ ಗರಿಕೆ. 'ದೂರ್ವಯಾಯುಷ್ಯ ವರ್ಧನಮ್' ಎಂಬಂತೆ ಗರಿಕೆಯು ಆಹುತಿ ಆಯುಷ್ಯವರ್ಧಕ. ಅದರೊಂದಿಗೆ ಸೇರಿದ ಮಧು ಆಜ್ಯ ದಧಿಗಳು ಶಾಂತಿ-ಪುಷ್ಟಿ-ತುಷ್ಟಿ ಪ್ರದಗಳು. ಹೀಗೆ ತ್ರಿಮಧುರಾಕ್ತ ದೂರ್ವಾದ್ರವ್ಯದಿಂದ ಮೃತ್ಯುಂಜಯ ಹೋಮವೂ ಆಯುಷ್ಯ ಹೋಮವೆನಿಸಿದೆ.

**ಜನ್ಮದಿನದ ಕರ್ತವ್ಯಗಳು :**

**ಸರ್ವೈಃ ಸ್ವಜನ್ಮದಿವಸೇ ಸ್ನಾತೈರ್ಮಂಗಲವಾರಿಭಿಃ ।**
**ಗುರುದೇವಾಗ್ನಿವಿಪ್ರಾಶ್ಚ ಪೂಜನೀಯಾ ವಿಶೇಷತಃ ॥**
**ಸ್ವನಕ್ಷತ್ರಂ ಚ ಪಿತರಸ್ತಥಾ ದೇವಃ ಪ್ರಜಾಪತಿಃ ।**
**ಪ್ರತಿಸಂವತ್ಸರಂ ಯತ್ನಾತ್ ಕರ್ತವ್ಯಶ್ಚ ಮಹೋತ್ಸವಃ ॥**

**(ಪ್ರಯೋಗಪಾರಿಜಾತ)**

ಜನ್ಮದಿನದಂದು ಹಬ್ಬವನ್ನು(ಮಹೋತ್ಸವ) ಆಚರಿಸಬೇಕು. ಮಂಗಳ ಸ್ನಾನದೊಂದಿಗೆ ನೂತನ ವಸ್ತ್ರವುಟ್ಟು ಗುರುಹಿರಿಯರಿಗೂ ದೇವತೆಗಳಿಗೂ ನಮಿಸಿ ಅರ್ಚಿಸಬೇಕು. ಪಿತೃಗಳನ್ನೂ, ಸ್ವನಕ್ಷತ್ರದೇವತೆ ಯನ್ನೂ, ಪ್ರಜಾಪತಿದೇವನನ್ನೂ ಪೂಜಿಸಬೇಕು.

ಜನ್ಮದಿನದಂದು ಆರು ನಿಷಿದ್ಧ. ಕೇಶ-ಉಗುರುಗಳನ್ನು ಕತ್ತರಿಸುವುದು. ಮೈಥುನ, ದೂರಪ್ರಯಾಣ, ಮಾಂಸಭಕ್ಷಣ, ಕಲಹ ಹಾಗೂ ಹಿಂಸೆ.

**ಖಂಡನಂ ನಖಕೇಶಾನಾಂ ಮೈಥುನಾಧ್ವಾಗಮೌ ತಥಾ ।**
**ಆಮಿಷಂ ಕಲಹಂ ಹಿಂಸಾಂ ವರ್ಷವೃದ್ಧೌ ವಿವರ್ಜಯೇತ್ ॥**

**(ಧರ್ಮಸಿಂಧು)**

ಆಯುಷ್ಯ ಹೋಮಾದಿಗಳನ್ನು ಆಚರಿಸದಿದ್ದರೂ ಪುಟ್ಟದಾದ ವರ್ಧಾಪನ ವಿಧಿ(ವರ್ಧಂತಿ)ಯನ್ನು ಪ್ರತಿಯೊಬ್ಬರೂ ಜನ್ಮದಿನದಂದು ಆಚರಿಸಿಕೊಳ್ಳಬೇಕು. ಸಂಧ್ಯಾ ಪೂಜೆಗಳನ್ನು ಮುಗಿಸಿ ಸಂಕಲ್ಪ-

**ಆಯುರಭಿವೃದ್ಧ್ಯರ್ಥಂ ವರ್ಷವೃದ್ಧಿಕರ್ಮ ಕರಿಷ್ಯೇ ।**
**ಶ್ರೀಗುರುಭ್ಯೋ ನಮಃ । ವೃದ್ಧಿಕರ್ಮಣ್ಯಾಜ್ಞಾ ದೀಯತಾಮ್ ।**
**ಗಂ ಗಣಪತಯೇ ನಮಃ । ಅವಿಘ್ನಂ ಕುರು ॥**

ರಂಗೋಲಿಯಿಂದ ಅಷ್ಟದಲ ಪದ್ಮವನ್ನು ಬರೆದು ಅದರ ಮೇಲೆ ಸ್ವಸ್ತಿಕೆಯನ್ನು ಅಥವಾ ಅಕ್ಕಿಯ 16 ಗುಪ್ಪೆಗಳನ್ನಿಟ್ಟು ಅದರಲ್ಲಿ 16 ದೇವತೆಗಳನ್ನು ಆವಾಹಿಸುತ್ತಾ ಅಕ್ಷತೆಕಾಳು ಹಾಕಬೇಕು.

1. ಕುಲದೇವತಾಯ್ಯೈ ನಮಃ ।

ಕುಲದೇವತಾಮ್ (ಲಕ್ಷ್ಮೀವೆಂಕಟೇಶಮ್) ಆವಾಹಯಾಮಿ।

2. ಜನ್ಮನಕ್ಷತ್ರ ದೇವತಾಯ್ಯೈ ನಮಃ ।

ಜನ್ಮನಕ್ಷತ್ರ ದೇವತಾಂ(ಅಶ್ವಿನ್ಯಧಿದೇವತೇ ಅಶ್ವಿನೌ) ಆವಾಹಯಾಮಿ ।

ಜನ್ಮನಕ್ಷತ್ರ ದೇವತೆಯನ್ನು ತಿಳಿದುಕೊಂಡಿರಬೇಕು. ಆಯಾ ದೇವತೆಯ ಹೆಸರನ್ನು ದ್ವಿತೀಯಾ ವಿಭಕ್ತಿಯಲ್ಲಿ ಹೇಳಿ ಆವಾಹಿಸಬೇಕು. ನಕ್ಷತ್ರದೇವತೆಗಳು ಕ್ರಮವಾಗಿ ದ್ವಿತೀಯಾ ವಿಭಕ್ತಿಯಲ್ಲಿ –

1. ಅಶ್ವಿನೀ – ಅಶ್ವಿನೌ
2. ಭರಣೀ – ಯಮಂ
3. ಕೃತ್ತಿಕಾ – ಅಗ್ನಿಂ
4. ರೋಹಿಣೀ – ಧಾತಾರಂ
5. ಮೃಗಶಿರಸ್– ಶಶಿನಂ
6. ಆರ್ದ್ರಾ – ರುದ್ರಂ
7. ಪುನರ್ವಸು – ಅದಿತಿಂ
8. ಪುಷ್ಯ – ಬೃಹಸ್ಪತಿಂ
9. ಆಶ್ಲೇಷಾ – ಸರ್ಪಾನ್
10. ಮಖಾ – ಪಿತ್ರೂನ್
11. ಪೂರ್ವಫಲ್ಗುನೀ–ಆರ್ಯಮಣಂ
12. ಉತ್ತರಫಲ್ಗುನೀ–ಭಗಂ
13. ಹಸ್ತ – ರವಿಂ
14. ಚಿತ್ತಾ– ತ್ವಷ್ಟಾರಂ
15. ಸ್ವಾತಿ – ವಾಯುಂ
16. ವಿಶಾಖಾ – ಇಂದ್ರಾಗ್ನೀ
17. ಅನುರಾಧಾ – ಮಿತ್ರಂ
18. ಜ್ಯೇಷ್ಠಾ – ಇಂದ್ರಂ
19. ಮೂಲ – ನಿರ್ಋತಿಂ
20. ಪೂರ್ವಾಷಾಢಾ – ಅಪಃ
21. ಉತ್ತರಾಷಾಢಾ–ವಿಶ್ವಾನ್‌ದೇವಾನ್
22. ಶ್ರವಣ – ವಿಷ್ಣುಂ
23. ಧನಿಷ್ಠಾ – ವಸೂನ್
24. ಶತಭಿಷಕ್ – ವರುಣಂ
25. ಪೂರ್ವಾಭಾದ್ರಾ–ಅಜೈಕಪಾದಂ
26. ಉತ್ತರಾಭಾದ್ರಾ – ಅಹಿರ್ಬುಧ್ನ್ಯಂ
27. ರೇವತಿ – ಪೂಷಣಂ

3. ಪಿತೃಗಣೇಭ್ಯೋ ನಮಃ । ಪಿತ್ರೂನ್ ಆವಾಹಯಾಮಿ ।

4. ಪ್ರಜಾಪತಯೇ ನಮಃ । ಪ್ರಜಾಪತಿಮ್ ಆವಾಹಯಾಮಿ ।

5. ವೇದವ್ಯಾಸಾಯ ನಮಃ । ವೇದವ್ಯಾಸಮಾವಾಹಯಾಮಿ ।
6. ಜಾಮದಗ್ನ್ಯರಾಮಾಯ ನಮಃ । ಪರಶುರಾಮಮಾವಾಹಯಾಮಿ।
7. ಹನುಮತೇ ನಮಃ । ಹನುಮಂತಮಾವಾಹಯಾಮಿ ।
8. ಅಶ್ವತ್ಥಾಮ್ನೇ ನಮಃ । ಅಶ್ವತ್ಥಾಮಾನಮಾವಾಹಯಾಮಿ ।
9. ಬಲಯೇ ನಮಃ । ಬಲಿಮಾವಾಹಯಾಮಿ ।
10. ವಿಭೀಷಣಾಯ ನಮಃ। ವಿಭೀಷಣಮಾವಾಹಯಾಮಿ ।
11. ಕೃಪಾಯ ನಮಃ । ಕೃಪಮಾವಾಹಯಾಮಿ ।
12. ಮಾರ್ಕಂಡೇಯಾಯ ನಮಃ । ಮಾರ್ಕಂಡೇಯಮಾವಾಹಯಾಮಿ।
13. ಷಷ್ಠೀದೇವ್ಯೈ ನಮಃ । ಷಷ್ಠೀದೇವೀಮಾವಾಹಯಾಮಿ ।
14. ಪ್ರಹ್ಲಾದಾಯ ನಮಃ । ಪ್ರಹ್ಲಾದಮಾವಾಹಯಾಮಿ ।
15. ಭಾನವೇ ನಮಃ । ಭಾನುಮಾವಾಹಯಾಮಿ ।
16. ವಿಘ್ನೇಶಾಯ ನಮಃ । ವಿಘ್ನೇಶಮಾವಾಹಯಾಮಿ ।

ಕೈಯಲ್ಲಿ ಅಕ್ಷತೆ ಪುಷ್ಪಗಳನ್ನು ಹಿಡಿದು – **'ಕುಲದೇವತಾದಿ ಷೋಡಶ ವರ್ಷವೃದ್ಧಿದೇವತಾಃ ಏತೇಷು ಅಕ್ಷತಪುಂಜೇಷು ಆವಾಹಯಾಮಿ'** ಹೀಗೆನ್ನುತ್ತಾ ಸ್ವಸ್ತಿಕೆಯ ಮೇಲೆ ಹಾಕಿ ಷೋಡಶೋಪ- ಚಾರಪೂಜೆಯನ್ನು ಮಾಡಬೇಕು. ಪಾಯಸ ಅಥವಾ ಫಲವನ್ನು ನಿವೇದಿಸಿ ಎದ್ದು ನಿಂತು ಪ್ರಾರ್ಥಿಸಬೇಕು.

## ಪ್ರಾರ್ಥನೆಗಾಗಿ ಶ್ಲೋಕಗಳು

**ಮಾರ್ಕಂಡೇಯ ಮಹಾಭಾಗ ಸಪ್ತಕಲ್ಪಾಂತ ಜೀವನ ।**
**ಆಯುರಾರೋಗ್ಯಮೈಶ್ವರ್ಯಂ ದೇಹಿ ಮೇ ಮುನಿಪುಂಗವ ॥**

**ನವ(ಸಪ್ತ)ವರ್ಷಾಯುಷಂ ಪ್ರಾಪ್ಯ ತಪಸಾ ಮಹತಾ ಪುರಾ ।**
**ಸಪ್ತಕಲ್ಪಂ ಕೃತಂ ಯೇನ ಆಯುಷ್ಯಂ ಮೇ ಸ ಯಚ್ಛತು ॥**
**ಮಾರ್ಕಂಡೇಯಾಯ ನಮಃ ॥**

ಆಯುರ್ದೇಹಿ ಯಶೋ ದೇಹಿ ಶ್ರಿಯಂ ದೇಹಿ ವಿನಾಯಕ ।
ಪುತ್ರಪೌತ್ರಾನ್ ಪ್ರಪೌತ್ರಾನ್ಶ್ಚ ದೇಹಿ ಮೇ ಗಣನಾಯಕ ॥
ಗಣಪತಯೇ ನಮಃ ॥

ಷಷ್ಠೀದೇವಿ ನಮಸ್ತುಭ್ಯಂ ಸೂತಿಕಾಗೃಹಶಾಯಿನಿ ।
ಪೂಜಿತೇ ಪರಯಾ ಭಕ್ತ್ಯಾ ದೀರ್ಘಮಾಯುಃ ಪ್ರಯಚ್ಛ ಮೇ॥
ಷಷ್ಠೀದೇವ್ಯೈ ನಮಃ ॥

ದ್ರೋಣಪುತ್ರ ಮಹಾಭಾಗ ರುದ್ರತೇಜಃಸಮುದ್ಭವ ।
ಆಯುರ್ಬಲಂ ಯಶೋ ದೇಹಿ ಚಾಶ್ವತ್ಥಾಮನ್ ನಮೋಽಸ್ತುತೇ ॥
ಅಶ್ವತ್ಥಾಮ್ನೇ ನಮಃ ॥

ದೈತ್ಯೇಂದ್ರಕುಲಸಂಭೂತ ದಾನಯಜ್ಞಕ್ರಿಯಾಪರ ।
ಬಲೇ ತ್ವಾಂ ಶರಣಂ ಯಾಮಿ ದೀರ್ಘಮಾಯುಃ ಪ್ರಯಚ್ಛ ಮೇ ॥
ಬಲಯೇ ನಮಃ ॥

ವಸಿಷ್ಠಕುಲಸಂಭೂತ ವೇದಶಾಸ್ತ್ರ ವಿಶಾರದ ।
ನಾರಾಯಣಾಂಶ ಸಂಭೂತ ವೇದವ್ಯಾಸ ನಮೋಽಸ್ತು ತೇ ॥
ವೇದವ್ಯಾಸಾಯ ನಮಃ ॥

ಆಂಜನೇಯ ಮಹಾಭಾಗ ಕಪೀಂದ್ರ ಸಚಿವೋತ್ತಮ ।
ರಾಮಪ್ರಿಯ ನಮಸ್ತುಭ್ಯಂ ಹನೂಮನ್ ರಕ್ಷ ಸರ್ವದಾ ॥
ಹನೂಮತೇ ನಮಃ ॥

ವಿಭೀಷಣ ನಮಸ್ತುಭ್ಯಂ ರಾಮಪಾದಾಬ್ಜಪೂಜಕ ।
ಆಯುರಾರೋಗ್ಯಮೈಶ್ವರ್ಯಂ ದೇಹಿ ಪೌಲಸ್ತ್ಯನಂದನ ॥
ವಿಭೀಷಣಾಯ ನಮಃ ॥

ದ್ವಿಜೇಂದ್ರ ಭಾರತಾಚಾರ್ಯ ಸರ್ವಶಾಸ್ತ್ರ ವಿಶಾರದ ।
ಶರಣಂ ತ್ವಾಂ ಪ್ರಪನ್ನೋಽಸ್ಮಿ ಕೃಪ ಮಾಂ ರಕ್ಷ ಸರ್ವದಾ ॥
ಕೃಪಾಯ ನಮಃ ॥

**ರೇಣುಕೇಯ ಮಹಾವೀರ್ಯ ಕಾರ್ತವೀರ್ಯಕುಲಾಂತಕ ।**
**ಆಯುಃ ಪ್ರಯಚ್ಛ ಮೇ ರಾಮ ಜಾಮದಗ್ನ್ಯ ನಮೋಽಸ್ತುತೇ॥**
**ಪರಶುರಾಮಾಯ ನಮಃ ॥**

**ತ್ರೈಲೋಕ್ಯೇ ಯಾನಿ ಭೂತಾನಿ ಸ್ಥಾವರಾಣಿ ಚರಾಣಿ ಚ ।**
**ಬ್ರಹ್ಮವಿಷ್ಣುಶಿವೈಃ ಸಾರ್ಧಂ ರಕ್ಷಾಂ ಕುರ್ವಂತು ತಾನಿ ಮೇ ॥**
**ಸರ್ವೇಭ್ಯೋ ದೇವೇಭ್ಯೋ ನಮಃ ।**
**ಪ್ರಾರ್ಥನಾಂ ಸಮರ್ಪಯಾಮಿ ॥**

ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿ ಸತಿಲಗುಡಪಯಃ ಪಾನವನ್ನು ಮಾಡಬೇಕು. ಕೈಯಲ್ಲಿ ಬೆಲ್ಲ-ಎಳ್ಳಿನೊಂದಿಗೆ ಹಾಲು ಬೆರಸಿ ಪ್ರಾಶನಕ್ಕಾಗಿ ಹಿಡಿದುಕೊಂಡು –

**ಸತಿಲಂ ಗುಡಸಂಮಿಶ್ರಮ್ ಅಂಜಲ್ಯರ್ಧಮಿತಂ ಪಯಃ ।**
**ಮಾರ್ಕಂಡೇಯಾದ್ವರಂ ಲಬ್ಧ್ವಾ ಪಿಬಾಮ್ಯಾಯುರ್ವಿವೃದ್ಧಯೇ ॥**

ಎಂಬ ಮಂತ್ರವನ್ನು ಹೇಳಿ ಕುಡಿಯಬೇಕು.

**ಅನೇನ ವರ್ಷವೃದ್ಧಿ ಪೂಜಾಕರಣೇನ ಭಗವಾನ್ ಮಧ್ವಪತಿಗೋಪಾಲಕೃಷ್ಣಃ ಪ್ರೀಯತಾಮ್ ॥ ಶ್ರೀಕೃಷ್ಣಾರ್ಪಣಮಸ್ತು ॥**

ಇಷ್ಟು ಮಾಡುವುದಕ್ಕೆ ಪುರೋಹಿತರನ್ನು ಹುಡುಕಿಕೊಂಡು ಹೋಗುವ ಅನಿವಾರ್ಯತೆಯಿಲ್ಲ. ಸ್ವತಃ ತಾವೇ ಮಾಡಿಕೊಳ್ಳಬಹುದಾದ ನಮ್ಮ ಹಿರಿಯರು ನಡೆಸಿಕೊಂಡು ಬಂದಿರುವ, 'ಧರ್ಮಸಿಂಧು'- 'ಪಾರಿಜಾತ' ಮುಂತಾದ ಗ್ರಂಥಗಳಲ್ಲಿ ಉಲ್ಲಿಖಿತವಾದ ವರ್ಧಂತೀ ವಿಧಿಯಿದು.

* * *

# ಕೂಶ್ಮಾಂ(ಷ್ಮಾಂ)ಡಾದಿ ಹೋಮಗಳು

ಯಜುರ್ವೇದದ ಕೂಶ್ಮಾಂಡ ಮಂತ್ರಗಳಿಂದ ಆಜ್ಯಾಹುತಿಯನ್ನಿತ್ತು ಮಾಡುವ ಪ್ರಾಯಶ್ಚಿತ್ತಹೋಮಕ್ಕೆ ಕೂಶ್ಮಾಂಡ ಹೋಮವೆಂದು ಹೆಸರು.

ಕೆಲವರು ಇದನ್ನು **'ಕೂಶ್ಮಾಂಡಿಹೋಮ'** ಎನ್ನುತ್ತಾರೆ. ಕೆಲವರು ಕೂಶ್ಮಾಂಡ ಎಂದರೆ ಇನ್ನೂ ಕೆಲವರು **'ಕೂಷ್ಮಾಂಡ'** ಎನ್ನುತ್ತಾರೆ.

ಎಲ್ಲಾ ಶಬ್ದಗಳೂ ಸರಿಯೇ. 'ಕೂಶ್ಮಾಂಡೈರ್ಜುಹುಯಾತ್' ಎಂಬ ವೇದದಲ್ಲಿ ಕೂಶ್ಮಾಂಡವೆಂಬ ಪುಲ್ಲಿಂಗದ ಶಬ್ದವನ್ನು ಪ್ರಯೋಗಿಸಿದ್ದಾರೆ. 'ತ್ರಿರಾತ್ರೋಪೋಷಿತೋ ಭೂತ್ವಾ ಕೂಷ್ಮಾಂಡೀಭಿರ್ಘೃತಂ ಶುಚಿಃ' ಎಂಬ ಯಾಜ್ಞವಲ್ಕ್ಯಸ್ಮೃತಿಯಲ್ಲಿ 'ಕೂಷ್ಮಾಂಡೀ' ಎಂಬ ಸ್ತ್ರೀಲಿಂಗದ ಶಬ್ದವನ್ನೂ ಬಳಸಿದ್ದಾರೆ. ಬೋಧಾಯನರೂ ಕೂಡ 'ಅಥ ಕೂಷ್ಮಾಂಡೀಭಿರ್ಜುಹು ಯಾತ್ ಯೋಽಪೂತಮಿವಾತ್ಮಾನಂ ಮನ್ಯೇತ ಯದರ್ವಾಗೇನ ಮೇನೋ ಭ್ರೂಣಹತ್ಯಾಯಾ ತಸ್ಮಾನ್ಮುಚ್ಯತೇ ಅಯೋನೌ ವಾ ರೇತಃ ಸಿಕ್ತ್ವಾ ಅನ್ಯತ್ರ ಸ್ವಪ್ನಾತ್' ಎಂದಿದ್ದಾರೆ.

'ಕೂಶ್ಮ' ಎಂಬ ಹೆಸರಿನ ದೇವತೆಗಳನ್ನು ಸ್ತುತಿಸಿ ಅವರ ಅನುಗ್ರಹವನ್ನು ಪಡೆದ ಋಷಿಗಳು 'ಕೂಷ್ಮಾಂಡ' ಎನಿಸಿದರು. ಈ ಕೂಶ್ಮಾಂಡಮುನಿಗಳು ಸಾಕ್ಷಾತ್ಕರಿಸಿಕೊಂಡ ಮಂತ್ರಗಳು ಕೂಶ್ಮಾಂಡ ಅಥವಾ ಕೂಶ್ಮಾಂಡಿಗಳು. 'ವಾತರಶನಾ ಹ ವಾ ಋಷಯಃ' ಎಂಬ ಖಂಡದಲ್ಲಿ ತೈತ್ತಿರೀಯ ಆರಣ್ಯಕದ

ಎರಡನೆಯ ಪ್ರಶ್ನೆ ಸ್ವಾಧ್ಯಾಯ ಬ್ರಾಹ್ಮಣದಲ್ಲಿ ಕೂಶ್ಮಾಂಡ ಹೋಮದ ಬಗ್ಗೆ ಹೇಳಿದೆ.

ಹಿಂದೊಮ್ಮೆ ಅರುಣಾದಿ ಮುನಿಗಳು ವಾತರಶನರೆಂಬ ಮುನಿಪುಂಗವರಲ್ಲಿ ಪ್ರಾರ್ಥಿಸಿಕೊಂಡರು. ಈ ವಾತರಶನರು ಆಗ ತಮ್ಮ ತಪೋಮಹಿಮೆಯಿಂದ ಕೂಶ್ಮಾಂಡ ಮಂತ್ರಗಳನ್ನು ಸಾಕ್ಷಾತ್ಕರಿಸಿ ಅರುಣಾದಿಗಳಿಗೆ ಉಪದೇಶಿಸಿದರು. ಈ ಕೂಶ್ಮಾಂಡಿ ಹೋಮದಿಂದ ಭ್ರೂಣಹತ್ಯೆಯ ತನಕದ ಪಾಪಗಳು ಪರಿಹಾರವಾಗುತ್ತವೆ.

'ಭ್ರೂಣಹತ್ಯೆ' ಎಂಬ ಶಬ್ದವನ್ನು ಇಲ್ಲಿ ಎರಡು ಅರ್ಥದಲ್ಲಿ ಬಳಸಿದ್ದಾರೆ. ಮೂರು ವೇದಗಳನ್ನು ಅರಿತ ಶ್ರೋತ್ರಿಯನು ಭ್ರೂಣ. ಅವನನ್ನು ಅವಮಾನಿಸಿ ಹಿಂಸಿಸುವುದು ಭ್ರೂಣಹತ್ಯೆ. ಎರಡನೆಯದಾಗಿ ಪಾಣಿಗೃಹೀತಿಯಾದ ಭಾರ್ಯೆಯಲ್ಲಿ ಋತುಕಾಲದಲ್ಲಿ ಗರ್ಭಾಧಾನವನ್ನು ಮಾಡದೇ ಇರುವುದೇ ಭ್ರೂಣಹತ್ಯೆ. ತಂದೆಯು ತನ್ನ ಮಗಳನ್ನು ಋತುಮತಿಯಾದ ಮೇಲೂ ವಿವಾಹ ಮಾಡದೇ ಹೋದರೂ ಆತನಿಗೆ ಭ್ರೂಣಹತ್ಯೆಯ ದೋಷವನ್ನು ಶಾಸ್ತ್ರಗ್ರಂಥಗಳು ಹೇಳಿವೆ.

ಇಂತಹ ಭ್ರೂಣಹತ್ಯೆಯ ದೋಷಪ್ರಾಯಶ್ಚಿತ್ತರೂಪವಾಗಿ ಕೂಶ್ಮಾಂಡ ಮಂತ್ರಗಳು.

ಕುಂಬಳಕಾಯಿಗೂ ಸಂಸ್ಕೃತದಲ್ಲಿ 'ಕೂಷ್ಮಾಂಡ' ಎಂದು ಹೆಸರು. ಭೂತ–ಪ್ರೇತ–ಪಿಶಾಚಿಗಳಂತೆ ಕೂಷ್ಮಾಂಡವೆಂಬ ರುದ್ರಗಣಗಳೂ ಇವೆ. ಈ ಕುಂಬಳಕಾಯಿಗೂ ರುದ್ರಗಣಗಳಿಗೂ ಕೂಶ್ಮಾಂಡ ಹೋಮದ ಸಂಬಂಧವೇ ಇಲ್ಲ. ಇದರ ಸ್ಪಷ್ಟತೆಗಾಗಿಯೇ ಇಲ್ಲಿ ಷಕಾರದ ಬದಲಾಗಿ ಶಕಾರವನ್ನು(ಕೂಶ್ಮಾಂಡ) ಬಳಸುವುದು.

ಕೂಶ್ಮಾಂಡ ಹೋಮವನ್ನು ಇಂದು ಎರಡು ಸಂದರ್ಭದಲ್ಲಿ ವಿಶೇಷವಾಗಿ ನಡೆಸುತ್ತಾರೆ. ಒಂದು ಔರ್ಧ್ವದೇಹಿಕ ಕ್ರಿಯೆಯ ಹನ್ನೆರಡನೇ

ದಿನ ಸಪಿಂಡೀಕರಣಕ್ಕೆ ಪೂರ್ವಭಾವಿಯಾಗಿ. ಎರಡನೆಯದು ವಿವಾಹ ಸಂದರ್ಭದಲ್ಲಿ.

ಋತುಮತಿಯರಾದ ನಂತರ ಪ್ರೌಢಾವಸ್ಥೆಯ ವಧುವನ್ನು ವಿವಾಹವಾಗುವುದರಿಂದ 'ವೃಷಲೀಪತಿತ್ವ' ದೋಷವುಂಟಾಗುವುದೆಂದು ಸ್ಮೃತಿಗಳು ಹೇಳಿವೆ. ಈ ದೋಷ ಇಂದಿನ ಕಾಲದಲ್ಲಿ ಅನಿವಾರ್ಯವೇ ಆಗಿದ್ದರೂ ಅದರ ಪ್ರಾಯಶ್ಚಿತ್ತಕ್ಕಾಗಿ ಕೂಷ್ಮಾಂಡಹೋಮದ ವಿಧಿಯಿದೆ.

ಯಾಜುಷ ಕ್ರಮದಲ್ಲಿ ನಡೆಯುವ ಹೋಮವಿದು. ಇಲ್ಲಿ ಎಪ್ಪತ್ತೆರಡು ಮಂತ್ರಗಳಿಂದ ಆಜ್ಯಹೋಮವಿದೆ. ನಮ್ಮಿಂದ ಘಟಿಸ ಬಹುದಾದ ಪಾಪಗಳ ಹೆಸರನ್ನು ಪ್ರತ್ಯೇಕವಾಗಿ ಉಲ್ಲೇಖಿಸಿ 'ಅಗ್ನಿರ್ಮಾ ತಸ್ಮಾದನ್ನೃಣಂ ಕೃಣೋತು' ಅಗ್ನಿದೇವನು ನನ್ನನ್ನು ಆ ಎಲ್ಲಾ ಪಾಪಗಳಿಂದ ವಿಮುಕ್ತನನ್ನಾಗಿಸಲಿ ಎಂಬ ಪ್ರಾರ್ಥನೆ ಇಲ್ಲಿದೆ.

ಈ ಹೋಮ ಮಾಡುವುದು ಅಸಾಧ್ಯವಾದಾಗ ಕೂಶ್ಮಾಂಡ ಮಂತ್ರಗಳ ಸಕೃದಾವೃತ್ತಿ ಪಾರಾಯಣವನ್ನು ಮಾಡಬೇಕು. ಸ್ವತಃ ಪಾರಾಯಣ ಮಾಡುವುದು ಸಾಧ್ಯವಾಗದಾದಾಗ ಪಾರಾಯಣ ಮಾಡಿಸಿ ಶ್ರವಣ ವನ್ನಾದರೂ ಮಾಡಬಹುದು. 'ಯಂ ಯಂ ಕ್ರತುಮಧೀತೇ ತೇನ ತೇನಾಸ್ಯೇಷ್ಟಂ ಭವತಿ' ಎಂದರೆ ಹೋಮ ಮಾಡಲಾಗದಿದ್ದರೆ ಹೋಮ ಮಂತ್ರಗಳ ಅಧ್ಯಯನ ಪಾರಾಯಣಗಳೂ ಹೋಮ ಫಲವನ್ನು ನೀಡುತ್ತವೆ.

ಋಗ್ವೇದದಲ್ಲಿ ಪವಮಾನಮಂತ್ರಗಳಿಂದ ನಡೆಸುವ ಹೋಮಕ್ಕಿರುವ ಮಹತ್ವ ಯಜುರ್ವೇದದಲ್ಲಿ ಕೂಶ್ಮಾಂಡ ಹೋಮಕ್ಕಿದೆ.

* * *

# ಇತರ ಹೋಮಗಳು

## ನಾಮತ್ರಯಮಂತ್ರಹೋಮ -

ತಿಳಿದೋ ತಿಳಯದೆಯೋ ನಡೆಸುವ ಸಕಲ ಪಾಪಗಳಿಗೆ ಪ್ರಾಯಶ್ಚಿತ್ತ ಭಗವನ್ನಾಮಸ್ಮರಣೆ. ಅದರಲ್ಲೂ ಕೆಲವು ನಾಮಗಳಿಗೆ ವೈಶಿಷ್ಟ್ಯವಿದೆ. ಸ್ನಾನ-ಶುದ್ಧಿಗಾಗಿ ಪುಂಡರೀಕಾಕ್ಷಸ್ಮರಣೆ. ಸುಖನಿದ್ದೆಗಾಗಿ ಮಾಧವಸ್ಮರಣೆ. ಆಪತ್ತಿನ ಪರಿಹಾರಕ್ಕಾಗಿ ನರಸಿಂಹಸ್ಮರಣೆ. ರೋಗ ರುಜಿನಗಳ ಪರಿಹಾರಕ್ಕಾಗಿ ಧನ್ವಂತರಿಸ್ಮರಣೆ. ಅದರಂತೆ ಸಕಲಪಾಪ ಪ್ರಾಯಶ್ಚಿತ್ತಕ್ಕಾಗಿ ಅಚ್ಯುತಾನಂತಗೋವಿಂದ ಸ್ಮರಣೆ.

**ಅಚ್ಯುತಾನಂತಗೋವಿಂದ ನಾಮೋಚ್ಚಾರಣ ಭೇಷಜಾತ್ ।**
**ನಶ್ಯಂತಿ ಸಕಲಾ ರೋಗಾಃ ಸತ್ಯಂ ಸತ್ಯಂ ವದಾಮ್ಯಹಮ್ ॥**

ಅಚ್ಯುತ-ಅನಂತ-ಗೋವಿಂದ ಎಂಬ ನಾಮತ್ರಯದ ಉಚ್ಚಾರ -ಣೆಯು ಸಕಲರೋಗಗಳಿಗೂ ಪಾಪಗಳಿಗೂ ದಿವ್ಯೌಷಧಿ. ಈ ನಾಮತ್ರಯ ಮಂತ್ರದ ಉಚ್ಚಾರಣೆಯಿಂದ ಸಕಲಪಾಪಗಳೂ ರೋಗಗಳೂ ನಾಶವಾಗು -ವುದರಲ್ಲಿ ಸಂಶಯವಿಲ್ಲ.

"ಅಚ್ಯುತಾಯನಮಃ ಅನಂತಾಯನಮಃ ಗೋವಿಂದಾಯ ನಮಃ" ಎಂಬುದು ನಾಮತ್ರಯಮಂತ್ರ. ಈ ಮಂತ್ರವನ್ನು ಹತ್ತುಸಾವಿರಬಾರಿ ಜಪಿಸಿ 1000 ಸಂಖ್ಯೆಯ ಆಜ್ಯಾಹುತಿಯನ್ನು ನೀಡುವ ನಾಮತ್ರಯಮಂತ್ರ ಹೋಮ

ಪರಮ ಪ್ರಾಯಶ್ಚಿತ್ತರೂಪವಾಗಿದ್ದು ವಿಷ್ಣುಪ್ರೀತಿಕರ. ಷಷ್ಟಿಪೂರ್ತಿಯ ವರ್ಷದಲ್ಲಿ ಬರುವ ಜನ್ಮನಕ್ಷತ್ರಗಳಲ್ಲಿ ಈ ಹೋಮವನ್ನು ಮಾಡುತ್ತಾರೆ.

**ಚಂಡಿಕಾ ಹೋಮ** –

ಮಾರ್ಕಂಡೇಯ ಪುರಾಣದಲ್ಲಿ ಬರುವ ದುರ್ಗಾ ಮಾಹಾತ್ಮ್ಯೆ ಯನ್ನು ವರ್ಣಿಸುವ ಏಳುನೂರು(ಸಪ್ತಶತೀ) ಶ್ಲೋಕಗಳಿಂದ ಪರಮಾನ್ನ ಹೋಮ. ಇದರಲ್ಲಿ ಶತಚಂಡೀ, ಸಹಸ್ರಚಂಡೀ ಎಂಬ ವಿಧಾನಗಳೂ ಇವೆ.

**ದುರ್ಗಾ ಹೋಮ** –

ಶ್ರೀ–ಭೂ–ದುರ್ಗಾ ಎಂಬುದು ಲಕ್ಷ್ಮೀದೇವಿಯ ಮೂರು ರೂಪಗಳು. ತಮೋಭಿಮಾನಿನಿಯಾದ ದುರ್ಗೆಯ ಮೂರು ಕಣ್ಣಿನ ಉಗ್ರರೂಪದ ಉಪಾಸನೆಯು ಪ್ರಸಿದ್ಧವಾಗಿದೆ. ಜಾತವೇದಸೇ...... ಎಂಬ ಋಗ್ವೇದದ ಋಕ್ಸೂಕ್ತದಿಂದ ಆಹುತಿಯನ್ನು ನೀಡುವ ದುರ್ಗಾ ಹೋಮವನ್ನು ವಿವಾಹಾದಿಗಳ ಪ್ರತಿಬಂಧಕಗಳ ನಿವೃತ್ತಿಗಾಗಿ ವಿಧಿಸಿದ್ದಾರೆ.

**ರುದ್ರಯಾಗ** –

ಯಜುರ್ವೇದದ ರುದ್ರನಮಕ–ಚಮಕಗಳನ್ನು ನಿರ್ದಿಷ್ಟ ಸಂಖ್ಯೆಯಲ್ಲಿ ಪಾರಾಯಣ ಮಾಡಿ ಹೋಮಿಸುವುದು. ಇದರಲ್ಲಿ **ಅತಿರುದ್ರ ಶತರುದ್ರ** ಇತ್ಯಾದಿ ಪ್ರಭೇದಗಳಿವೆ.

**ಪುರಶ್ಚರಣ ಹೋಮಗಳು** –

ಮನ್ಯುಸೂಕ್ತ, ಭಾಗ್ಯಸೂಕ್ತ, ಹರಿವಾಯುಸ್ತುತಿ ಮುಂತಾದ ಮಂತ್ರಗಳ ಪುರಶ್ಚರಣೆಯನ್ನು ಏಳು ದಿನ ಇಲ್ಲವೇ 48 ದಿನಗಳಲ್ಲಿ ಮಾಡಿ ಅದರ ಪೂರ್ಣತೆಗಾಗಿ ಆಜ್ಯ, ಪರಮಾನ್ನಾದಿಗಳಿಂದ ಹೋಮಿಸುವ ವಿಧಿ.

**ಉದ್ಯಾಪನ ಹೋಮಗಳು –**

ಪುರಾಣಗಳಲ್ಲಿ ನಿರೂಪಿತವಾದ ನೂರಾರು ವ್ರತಗಳಿವೆ. ಇವುಗಳು ನಿತ್ಯವ್ರತ ಕಾಮ್ಯವ್ರತಗಳೆಂದು ಎರಡು ಬಗೆ. ನಿತ್ಯವ್ರತಗಳಾದ ಏಕಾದಶೀ, ಚಾತುರ್ಮಾಸ್ಯ ಮುಂತಾದವುಗಳಿಗೆ ಉದ್ಯಾಪನೆಯಿಲ್ಲ. ಉಳಿದಂತೆ ಋಷಿಪಂಚಮೀವ್ರತ, ಭೀಷ್ಮಪಂಚಕವ್ರತ, ವಿಷ್ಣುಪಂಚಕವ್ರತ, ಲಕ್ಷನಮಸ್ಕಾರ ವ್ರತ, ಗೋಪದ್ಮವ್ರತ ಮುಂತಾದ ವಿಶೇಷಗಳಿಗೆಲ್ಲಾ ವಿಷ್ಣ್ವಾಹುತಿಗಳನ್ನಿತ್ತು ಹೋಮ ಮಾಡುವ ಉದ್ಯಾಪನ ವಿಧಿಯಿದೆ. ಸತ್ಯನಾರಾಯಣವ್ರತ, ಅನಂತಪದ್ಮನಾಭವ್ರತಗಳಿಗೂ ಉದ್ಯಾಪನ ಹೋಮದ ಪ್ರಯೋಗವಿದೆ.

**ಹೃದಯ ಮಂತ್ರ ಹೋಮ –**

ಲಕ್ಷ್ಮೀಹೃದಯ, ನಾರಾಯಣಹೃದಯ, ಆದಿತ್ಯಹೃದಯ ಮುಂತಾದ ಹೃದಯಮಂತ್ರಗಳಿವೆ. ಈ ಹೃದಯಸ್ತೋತ್ರಗಳನ್ನು ಸಂಕಲೀ ಕರಣ, ಸಂಪುಟೀಕರಣ ಮುಂತಾದ ಕ್ರಮದಿಂದ ಪಠಿಸಿ ಮೂಲಮಂತ್ರ ಗಳೊಂದಿಗೆ ಆಹುತಿ ನೀಡುವ ಹೋಮಗಳು ಹೃದಯ ಮಂತ್ರಹೋಮ ಗಳು.

**ಕಾಕಪ್ರವೇಶಾದಿ ಶಾಂತಿ ಹೋಮಗಳು –**

ಮನೆಗೆ ಇಲ್ಲವೇ ದೇವಾಲಯಗಳಿಗೆ ಕಾಗೆ, ಗೂಬೆ, ನಾಯಿ, ತೋಳ ಮುಂತಾದವು ಪ್ರವೇಶಿಸಿದಾಗ ಶಾಂತಿಹೋಮಗಳು ವಿಹಿತವಾಗಿವೆ. ಧೂಮಕೇತ್ವಾದಿ ಉತ್ಪಾತಗಳಿಗೂ ಶಾಂತಿಕರ್ಮವನ್ನು ಶಾಸ್ತ್ರಗಳು ಆದೇಶಿಸಿದೆ. ಗ್ರಹಣಕಾಲದಲ್ಲಿ ತಮ್ಮ ತಮ್ಮ ನಕ್ಷತ್ರಗಳಿಗೆ ಸೂಚಿತವಾದ ದೋಷಗಳ ಶಾಂತಿಗಾಗಿ ಗ್ರಹಣಶಾಂತಿವಿಧಿಯೂ ಪ್ರಸಿದ್ಧವಿದೆ.

**ಸಂಹಿತಾ ಹೋಮಗಳು –**

ಋಕ್ಸಂಹಿತಾ, ಯಜುಸ್ಸಂಹಿತಾ, ಸಾಮಸಂಹಿತಾ, ಅಥರ್ವಸಂಹಿತಾ ಗಳಿಂದ ಪ್ರತಿಮಂತ್ರಗಳಿಂದಲೂ ಆಜ್ಯಾಹುತಿಯನ್ನಿತ್ತು ನಡೆಸುವ ಸಂಹಿತಾ ಹೋಮಗಳು ಪ್ರಸಿದ್ಧ. ಸಂಹಿತೆಯ ಕೆಲಭಾಗಗಳಿಂದ ಮಾತ್ರ ಹೋಮಿಸುವ

ಪೂಯಮಾನ ಹೋಮ, ಶತರ್ಚಿಮಂಡಲ ಹೋಮ, ಪವಮಾನ ಹೋಮಗಳು ಅನುಷ್ಠಾನದಲ್ಲಿವೆ.

**ಅಷ್ಟಮಹಾಮಂತ್ರಾದಿ ಹೋಮ –**

ಶ್ರೇಷ್ಠವಾದ ಯಾವುದೇ ಮಂತ್ರದಿಂದ ಹೋಮಿಸಬಹುದು. ಸರ್ವ ಮಂತ್ರಗಳಿಗೂ ಮೂಲಮಂತ್ರಗಳು ಎಂಟು. ಪ್ರಣವ, ವ್ಯಾಹೃತಿ, ನಾರಾಯಣಾಷ್ಟಾಕ್ಷರ, ದ್ವಾದಶಾಕ್ಷರ, ಗಾಯತ್ರೀ, ಮಾತೃಕಾ, ಪುರುಷಸೂಕ್ತ, ವಿಷ್ಣುಷಡಕ್ಷರವೆಂಬ ಈ ಎಂಟು ಮಂತ್ರಗಳನ್ನು ಜಪಿಸಿದರೆ ಸರ್ವಮಂತ್ರಗಳನ್ನು ಜಪಿಸಿದ ಫಲವನ್ನು ಶ್ರೀಮಧ್ವಾಚಾರ್ಯರು ತಮ್ಮ ತಂತ್ರಸಾರ ಸಂಗ್ರಹದಲ್ಲಿ ಹೇಳಿದ್ದಾರೆ. ಈ ಮಂತ್ರಗಳಿಂದ ವಿಹಿತ ಸಂಖ್ಯೆಯ ಹೋಮವನ್ನು 'ಅಷ್ಟಮಹಾಮಂತ್ರ ಹೋಮ' ಎನ್ನುತ್ತಾರೆ.

* * *

# ಹೋಮಾಂಗ ದಾನಗಳು

ಯಜ್ಞಾಂತ್ಯದಲ್ಲಿ ಕೆಲವು ದಾನಗಳು ಕರ್ತವ್ಯ. ಕಲಶಾರಾಧನೆಯೊಂದಿಗೆ ನಡೆಯುವ ಸಕಲಯಾಗಗಳಲ್ಲೂ ಕಲಶದಾನ ಹಾಗೂ ಅನ್ನದಾನಗಳು ಅಂಗಕರ್ಮಗಳಾಗಿವೆ. ಆಜ್ಯದಾನ-ಫಲದಾನಗಳು ಉಪಾಂಗಗಳಾಗಿವೆ. ಯಜ್ಞವು ಸಾಂಗೋಪಾಂಗವೆನಿಸಬೇಕಾದರೆ ಈ ದಾನಗಳನ್ನು ಕೊಡಬೇಕು. ಕಲಶವನ್ನು ದಾನವೀಯುವಾಗ ಅದರೊಂದಿಗೆ ವಸ್ತ್ರ ಹಾಗೂ ಪ್ರತಿಮೆಯಿರಬೇಕು.(ಪ್ರತಿಮೆಯ ಸ್ಥಾನದಲ್ಲಿ ನಾಣ್ಯವನ್ನಾದರೂ ಇಟ್ಟಿರಬೇಕು)

**ಸವಸ್ತ್ರಪ್ರತಿಮಂ ಕುಂಭಂ ಪ್ರಾಪ್ತಾರಿಷ್ಟನಿವಾರಣಮ್ ।**
**ತುಭ್ಯಂ ದಾಸ್ಯಾಮಿ ವಿಪ್ರೇಂದ್ರ ಯಥೋಕ್ತಫಲದೋ ಭವ ॥**

ವಸ್ತ್ರ ಹಾಗೂ ಪ್ರತಿಮೆಯೊಂದಿಗೆ ಈ ಕಲಶವನ್ನು ದಾನವೀಯುತ್ತಿದ್ದೇನೆ ಎಂಬ ಭಾವದ ಮಂತ್ರದಿಂದ ತಾಂಬೂಲದಕ್ಷಿಣೆಯೊಂದಿಗೆ ದಾನವೀಯಬೇಕು. ಯಜ್ಞಗಳಲ್ಲಿ ಪ್ರಧಾನಕಲಶವನ್ನು ಪ್ರಧಾನಪುರೋಹಿತ ರಿಗೆ ದಾನವೀಯುವುದು ಸಂಪ್ರದಾಯ ಪ್ರಾಪ್ತವಾಗಿದೆ. 'ಕಲಶಮಾಚಾರ್ಯಾಯ ದದ್ಯಾತ್' ಎಂಬ ಪ್ರಯೋಗ ವಚನವಿದೆ. ಪುರೋಹಿತರೇ ಸ್ವತಃ ಆದೇಶಿಸಿದಲ್ಲಿ ಮಾತ್ರ ಉಪಸ್ಥಿತರಿರುವ ಜ್ಯೇಷ್ಠ-ಶ್ರೇಷ್ಠರಿಗೆ ಕಲಶವನ್ನು ಕೊಡಬಹುದು. ಅಂತೂ ಅದರ ಅಧಿಕಾರ ಪ್ರಧಾನಪುರೋಹಿತರದು.

ಗಣಹೋಮದಲ್ಲಿ ಅಷ್ಟದ್ರವ್ಯ, ಪವಮಾನಹೋಮದಲ್ಲಿ ಕ್ಷೀರ, ಆಜ್ಯ, ಮಧು, ಉದಕಗಳು, ನವಗ್ರಹಯಜ್ಞದಲ್ಲಿ ಗ್ರಹಧಾನ್ಯಾದಿಗಳು,

ಮೃತ್ಯುಂಜಯಹೋಮದಲ್ಲಿ ತೈಲ-ಲೋಹಾದಿಪಂಚಕ ಮುಂತಾದ ದಾನವಿಶೇಷಗಳಿವೆ. ಕಲಶದಾನವಲ್ಲದೇ ಆಯಾಯ ಹೋಮಕ್ಕೆ ಆದೇಶಿಸಿರುವ ದಾನವಿಶೇಷಗಳನ್ನು ಅನುಷ್ಠಾನಮಾಡಬೇಕು. ಷಷ್ಟಿಪೂರ್ತಿ ಮುಂತಾದ ಶಾಂತಿಕರ್ಮಗಳಲ್ಲಿ ದಶದಾನ, ವಾಯನದಾನ, ಇಷ್ಟವಸ್ತು ದಾನಾದಿಗಳನ್ನು ವಿಶೇಷವಾಗಿ ಆಚರಿಸಬೇಕು. ಇಲ್ಲಿ ಹೋಮಕ್ಕಿಂತಲೂ ದಾನಕ್ಕೇ ಅಧಿಕಮಹತ್ವವಿದೆ.

## ದಾನಕ್ರಮ

1. ಸಾಮಾನ್ಯವಾಗಿ ದಾನಕೊಡುವವನು ಪೂರ್ವಾಭಿಮುಖವಾಗಿಯೂ ತೆಗೆದುಕೊಳ್ಳುವವನು ಉತ್ತರಾಭಿಮುಖವಾಗಿಯೂ ಕುಳಿತಿರಬೇಕು (ಪೂರ್ವ-ಪಶ್ಚಿಮವೂ ಆಗಬಹುದು)

2. ದಾನಕೊಡುವುದಕ್ಕಾಗಿ ಐದು ವಸ್ತುಗಳು ಬೇಕು. ತಾಂಬೂಲ, ದೇಯ ವಸ್ತು(ಕಲಶ, ಗ್ರಹಧಾನ್ಯ ಇತ್ಯಾದಿ) ತುಳಸಿ, ನೀರು ಹಾಗೂ ದಕ್ಷಿಣೆ. ಈ ಐದರ ಜೊತೆಗೆ ಶ್ರದ್ಧೆ ಹಾಗೂ ಉಪಚಾರವಚನಗಳೂ ಅಪೇಕ್ಷಿತ.

3. ದಾನಕಾಲದಲ್ಲಿ ಕೊಡುವ ತಾಂಬೂಲದಲ್ಲಿ ವೀಳ್ಯದೆಲೆಗಳ ಸಂಖ್ಯೆ ನಾಲ್ಕಕ್ಕಿಂತ ಕಡಿಮೆಯಿರಕೂಡದು. ಅಡಿಕೆ ಚೂರು ಎರಡಾದರೂ ಇರಲಿ.

4. ಪ್ರತಿಗ್ರಹೀತೃವಿಪ್ರನಿಗೆ ಸ್ವಾಗತ ಹೇಳಿ ಕೈಹಿಡಿದು ಕೂಡಿಸುವುದು. ಅವರಿಗೆ ಗಂಧಾದ್ಯಲಂಕಾರದ್ರವ್ಯವನ್ನಿತ್ತು ಮೊದಲು ತಾಂಬೂಲವನ್ನು ನೀಡುವುದು. ಪತ್ನಿಸಮೇತನಾಗಿ ದಾನಕೊಡಬೇಕಿರುವ ಕಲಶಾದಿವಸ್ತುಗಳನ್ನು ದಾನ ಕೊಡುವುದು. ಆಮೇಲೆ ಕೈಯಲ್ಲಿ ತುಳಸಿ ಹಿಡಿದು ಸಹಧರ್ಮಿಣಿಯಿಂದ ನೀರು ಹಾಕಿಸಿಕೊಂಡು ದಕ್ಷಿಣೆಯೊಂದಿಗೆ ಆ ತುಳಸಿಯನ್ನಿಟ್ಟು ವಿಪ್ರನಿಗೆ ನೀಡಿ 'ತುಭ್ಯಮಹಂ ಸಂಪ್ರದದೇ। ನ ಮಮ।' ಎನ್ನಬೇಕು. ಈಗ ಯಥೋಚಿತ ಉಪಚಾರದ ಮಾತನ್ನೂ

ಆಡಬೇಕು. "ಅನುಷ್ಠಾನ–ಅಧ್ಯಾಪನಗಳಲ್ಲಿ ನಿರತರಾಗಿರುವ ತಮ್ಮನ್ನು ಇಷ್ಟುದೂರ ಕರೆಸಿಕೊಂಡು ತೊಂದರೆ ಮಾಡಿದ್ದೇವೆ. ಉಪಚಾರ–ಅಪಚಾರಗಳ ವ್ಯತ್ಯಾಸ ಅರಿಯದೇ ನಮ್ಮಿಂದ ನಡೆಯುವ ಪ್ರಮಾದಗಳನ್ನು ದಯವಿಟ್ಟು ಕ್ಷಮಿಸಿ. ದೇವಪ್ರತೀಕದಂತಿರುವ ತಾವು ನಮ್ಮ ಶ್ರೇಯಸ್ಸಿಗಾಗಿ ದೇವರಲ್ಲಿ ಪ್ರಾರ್ಥಿಸಿ ಆಶೀರ್ವದಿಸಬೇಕು" ಎನ್ನುತ್ತಾ ಪತ್ನೀಸುತರೊಡನೆ ನಮಸ್ಕರಿಸಬೇಕು.

5. ದಾನವೀಯುವ ಕಾಲದಲ್ಲಿ ಕ್ರೋಧ–ಉದ್ವೇಗಗಳು ಇರಕೂಡದು. 'ಇಷ್ಟಂ ದತ್ತಂ ಹುತಂ ಜಪ್ತಂ ಕ್ರೋಧಿತಸ್ಯ ವೃಥಾ ಭವೇತ್'

6. ಶಯ್ಯಾ, ಗೋವು, ಕೂಷ್ಮಾಂಡ ಮುಂತಾದ ದಾನಗಳನ್ನಿತ್ತಾಗ ಆ ವಸ್ತುಗಳನ್ನು ಪ್ರತಿಗೃಹೀತೃವಿನ ಮನೆಗೆ ತಲುಪಿಸುವ ವ್ಯವಸ್ಥೆಯನ್ನು ದಾತೃವೇ ಮಾಡಬೇಕು. ಇಲ್ಲವಾದರೆ ದಾನದ ಅರ್ಧಫಲ ಕ್ಷೀಣವಾಗುತ್ತದೆ.

7. ವಿಪ್ರರ ಮನೆಗೇ ಹೋಗಿ ಪೂಜಿಸಿ ದಾನವನ್ನೀಯುವುದು ಉತ್ತಮೋತ್ತಮ ದಾನ. ವಿಪ್ರರನ್ನು ಸ್ವಗೃಹಕ್ಕೆ ಕರೆಸಿಕೊಂಡು ಸತ್ಕರಿಸಿ ದಾನವೀಯುವುದು ಉತ್ತಮದಾನ. ವಿಪ್ರರನ್ನು ಕಾಯಿಸಿ ಸತ್ಕಾರದ ಮಾತನ್ನಾಡದೇ ಧನಮದದಿಂದ ಅನ್ಯಾಯಾರ್ಜಿತ ಧನವನ್ನು ನೀಡುವ ದಾನ ಅಧಮದಾನ. ವಿಪ್ರರನ್ನು ಹಳಿಯುತ್ತಾ 'ತೆಗೋ ಬದುಕು' ಎಂಬ ತಾತ್ಸಾರದಿಂದ ನೀಡಿದ ದಾನ ನೀಚದಾನ. ಇದು ತಾಮಸ.

* * *

# ಶ್ರೀರಾಘವೇಂದ್ರ ದರ್ಶನ ಕೇಂದ್ರ

ಆಶ್ರಯ : ಶ್ರೀ ರಾಘವೇಂದ್ರ ಸ್ವಾಮಿಗಳ ಮಠ, ಕೆಂಗೇರಿ ಉಪನಗರ, ಬೆಂಗಳೂರು
ದೂರವಾಣಿ: 23402528 / 28484205

## ಜ್ಞಾನ ಪ್ರಸಾರಕ್ಕೆ ಮೀಸಲಾದ ಸಂಸ್ಥೆ

ಸ್ಥಾಪನೆ : 1993ರ ನವರಾತ್ರಿ ಗ್ರಂಥಪ್ರಕಾಶನ: 1994 ರಿಂದ

## ಈವರೆಗೆ ಪ್ರಕಟವಾಗಿರುವ ಗ್ರಂಥಗಳು

**1.** **ಶ್ರೀವೆಂಕಟೇಶ ವೈಭವಮ್**
(ತಿರುಮಲತಿರುಪತಿಯ ಶ್ರೀನಿವಾಸನ ಮಹಿಮೆ), ನಾಲ್ಕನೇ ಮುದ್ರಣ.

**2.** **ಶ್ರೀ ವಿಷ್ಣುಸಹಸ್ರನಾಮ ಮತ್ತು ಇತರ ಸ್ತೋತ್ರಗಳು,** ಎರಡನೆಯ ಮುದ್ರಣ.

**3.** **ಸದಾಚಾರ ವೈಭವಮ್** (ಹಬ್ಬಹರಿದಿನಗಳ ಕೈಪಿಡಿ), ಎರಡನೆಯ ಮುದ್ರಣ.

**4.** **ಸುಂದರಕಾಂಡ,** (ಶ್ರೀಕೇಶವನಾಮ – ಮಧ್ವನಾಮ ಸಹಿತ)

**5.** **ವಿಘ್ನೇಶ್ವರ ಸ್ತೋತ್ರ ಸಂಧಿ,** (ಹರಿಕಥಾಮೃತ ಸಾರದಿಂದ ಅರ್ಥಸಹಿತ)

**6.** **ಮಧ್ವಸಿದ್ಧಾಂತದಲ್ಲಿ ಶಿವನ ಸಂಸಾರ**

**7.** **ಶ್ರೀವಿಷ್ಣು ಸಹಸ್ರನಾಮ (ಅರ್ಥಸಹಿತ)**
ಬಿಜಾಪುರದ ಗೀತಾಪ್ರಕಾಶನದ ಸಹಯೋಗ.

**8.** **ಶ್ರೀ ರಾಘವೇಂದ್ರ ಸ್ವಾಮಿಗಳ ಸಂದೇಶ,** (ಬೃಂದಾವನ ಪ್ರವೇಶದ ಮುನ್ನ)

**9.** **ಶ್ರಾದ್ಧಕರ್ಮ** ವಿಸ್ತರಿಸಿದ ನಾಲ್ಕನೆಯ ಮುದ್ರಣ.

**10.** **ದಶಾವತಾರ ಸ್ತುತಿ ಮತ್ತು ಅಣುಮಧ್ವವಿಜಯ** (ಅರ್ಥಸಹಿತ)

**11.** **ಮತತ್ರಯ ಸಮೀಕ್ಷಾ,**
(ಶಂಕರ–ರಾಮಾನುಜ–ಮಧ್ವ ದರ್ಶನಗಳ ಕಿರುಪರಿಚಯ)

**12.** **ಸಂಸ್ಮರಣೆ**
(ಮಠದ ಅಭಿವೃದ್ಧಿಗೆ ದುಡಿದವರಿಗೆ – ದುಡಿಯುತ್ತಿರುವವರಿಗೆ ಕೃತಜ್ಞತೆಯ ಕಾಣಿಕೆ)

**13.** **ಪ್ರಹ್ಲಾದಕೃತ ನರಸಿಂಹಸ್ತುತಿ,** (ಅರ್ಥಸಹಿತ)

**14.** **ಶ್ರೀಮದ್ ಭಾಗವತ** (ಸಪ್ತಾಹ ಕ್ರಮದಲ್ಲಿ), ಮೂರನೆಯ ಮುದ್ರಣ

**15.** **ಮಂತ್ರಾಲಯದ ದಿವ್ಯಚೇತನ,** (ಶ್ರೀರಾಘವೇಂದ್ರರ ಗ್ರಂಥಗಳ ಪರಿಚಯ)

**16.** **ಮಧ್ವ ಸಿದ್ಧಾಂತ ಮತ್ತು ಶ್ರೀ ರಾಘವೇಂದ್ರ ಸ್ವಾಮಿಗಳ ಸಂದೇಶ.**

**17.** **ಸಂಕ್ಷಿಪ್ತ ದೇವ ಪೂಜಾ ಪದ್ಧತಿ.**

**18.** **ಹೋಮ – ಹವನಗಳು.** (ಒಂದು ಚಿಂತನೆ)

# ಶ್ರೀ ಗುರುರಾಜ ಚಾರಿಟಬಲ್ ಟ್ರಸ್ಟ್

75, 'ಸಾವೆಲ್ಲಿ ಹೌಸ್', ರೈಲ್ವೇ ಸಮಾನಾಂತರ ರಸ್ತೆ, 1ನೇ ಬ್ಲಾಕ್,
ಕುಮಾರಾಪಾರ್ಕ್ ವೆಸ್ಟ್, ಬೆಂಗಳೂರು-560 020, ✆ 23561642

ಮೇಲ್ಕಂಡ ಸಂಸ್ಥೆಯು ರಿಜಿಸ್ಟರ್ ಆಗಿರುವ ಒಂದು ಪಬ್ಲಿಕ್ ಚಾರಿಟಬಲ್ ಸಂಸ್ಥೆಯಾಗಿದೆ.

ಇದರ ಮುಖ್ಯ ಉದ್ದೇಶಗಳೇನೆಂದರೆ -

ಸಮಾಜದಲ್ಲಿ, ಆಶ್ರಯ-ಆಸರೆ ಇಲ್ಲದೆ, ವೃದ್ಧಾಪ್ಯದಲ್ಲಿ ದುರ್ಭರ ಜೀವನ ಸಾಗಿಸುತ್ತಿರುವವರನ್ನು ಗುರುತಿಸಿ, ಅವರಿಗೆ ಪ್ರತಿ ತಿಂಗಳೂ ಸಹಾಯಧನವನ್ನು ನೀಡುವುದು. (ಈಗಾಗಲೇ ಈ ಕಾರ್ಯ ನಡೆಯುತ್ತಿದೆ).

ಪ್ರಾಣರಕ್ಷಣೆಗಾಗಿ, ಶಸ್ತ್ರಚಿಕಿತ್ಸೆಯು ಅನಿವಾರ್ಯವಾಗಿರುವ ಸಂದರ್ಭಗಳಲ್ಲಿ, ಅತ್ಯಂತ ಅಗತ್ಯವಿರುವವರಿಗೆ ಹೆಚ್ಚಿನ ಹಣಸಹಾಯ ಮಾಡುವುದು.

ಇಂತಹ ಸತ್ಕಾರ್ಯದಲ್ಲಿ ಆಸಕ್ತಿ ಉಳ್ಳವರಿಂದ ಕಾಣಿಕೆ ಸ್ವೀಕರಿಸಿ, ಅಧಿಕೃತ ರಸೀತಿ ನೀಡಲಾಗುವುದು.

ದಾನಿಗಳು ನೀಡುವ ಹಣಕ್ಕೆ ಆದಾಯಕರ ತೆರಿಗೆ ವಿನಾಯತಿ ಉಂಟು.

ಹೆಚ್ಚಿನ ವಿವರಗಳು ಬೇಕಾದಲ್ಲಿ ದಯಮಾಡಿ ಕೆಳಕಂಡವರನ್ನು ಸಂಪರ್ಕಿಸಿ.

| ಜಿ. ವೆಂಕಟೇಶ್ | ಡಿ.ವಿ. ಕೃಷ್ಣಮೂರ್ತಿ | ಡಿ.ಎಸ್. ರಾಘವೇಂದ್ರರಾವ್ |
|---|---|---|
| ಅಧ್ಯಕ್ಷರು | ಕಾರ್ಯದರ್ಶಿ | ಕೋಶಾಧಿಕಾರಿ |
| ✆ 9886408691 | ✆ 23402528 | ✆ 23409876 |

# ನಿಮಗಾಗಿ ಏನು ಮಾಡಿಕೊಂಡಿದ್ದೀರಿ?

ನೀವು ಬೇಕಾದಷ್ಟು ಗಳಿಸಿರಬಹುದು. ಬ್ಯಾಂಕಿನಲ್ಲಿ ಸಾಕಷ್ಟು ಹಣ ಇಟ್ಟಿರಬಹುದು. ಮಕ್ಕಳಿಗೆಲ್ಲಾ ಆಸ್ತಿ ಮಾಡಿರಬಹುದು. ಮಡದಿಗೆ ಮೈಭಾರವಾಗುವಷ್ಟು ಚಿನ್ನ ಹೇರಿರಬಹುದು. ನಿಮ್ಮ ಕುಟುಂಬ ಭವ್ಯ ಬಂಗಲೆಯೊಂದರಲ್ಲಿ ವಾಸಿಸುತ್ತಿರಬಹುದು.

ಆದರೆ, ಅನಿವಾರ್ಯವಾದ ಮರಣಾನಂತರ, ಕೂಡಿಟ್ಟ ಹಣ, ಕಟ್ಟಿದ ಮನೆ ಹಿಂದೆ ಉಳಿಯುತ್ತದೆ. ಹೆಂಡತಿ ಹೊಸ್ತಿಲಿನವರೆಗೆ, ಮಕ್ಕಳು ಸ್ಮಶಾನದವರೆಗೆ ಬರುತ್ತಾರೆ. ಭೋಗ-ಭಾಗ್ಯ ಅನುಭವಿಸಿದ ಈ ದೇಹ ಬೆಂಕಿಯಲ್ಲಿ ಬೆಂದು ಭಸ್ಮವಾಗುತ್ತದೆ. ಈಗ ಹೇಳಿ, ಸದಾ ನಿಮ್ಮೊಂದಿಗೆ ಬರುವುದು ಯಾವುದು?

ಮರಣಾನಂತರವೂ ನಮ್ಮೊಂದಿಗೆ ಬರುವುದು, ನಾವು ಇಲ್ಲಿ ಮಾಡಿದ ಧರ್ಮವೊಂದೇ. ಒಂದಲ್ಲ ಒಂದು ದಿನ, ಯಮಧರ್ಮರಾಜನ ಮುಂದೆ ನಾವು ಒಂಟಿಯಾಗಿ ನಿಂತು ಉತ್ತರ ಹೇಳಲೇಬೇಕಾಗುತ್ತದೆ. ನಮ್ಮ ರಕ್ಷಣೆಗೆ ಅಲ್ಲಿ ಯಾರೂ ಬರಲಾರರು. ಆದ್ದರಿಂದ ಧರ್ಮವನ್ನು ಆಚರಿಸಿ. ಏಕೆಂದರೆ ಇಲ್ಲಿ ಧರ್ಮವನ್ನು ಆಚರಿಸಿದವನನ್ನು, ಅಲ್ಲಿ ಧರ್ಮವು ರಕ್ಷಿಸುತ್ತದೆ. ಧರ್ಮಾಚರಣೆ ಮಾಡುವವರನ್ನು ಧರ್ಮವು ರಕ್ಷಿಸುತ್ತದೆ.

**ಧರ್ಮೋರಕ್ಷತಿ ರಕ್ಷಿತಃ**

**ಧರ್ಮಾಚರಣೆ ಮಾಡುವವರನ್ನು**
**ಧರ್ಮವು ರಕ್ಷಿಸುತ್ತದೆ.**

**- ಭಗವಾನ್ ವೇದವ್ಯಾಸರು**

ಪೂರ್ಣಪ್ರಜ್ಞವಿದ್ಯಾಪೀಠದಲ್ಲಿ ಸಾಂಪ್ರದಾಯಿಕ ಹನ್ನೆರಡು ವರ್ಷಗಳ ಶಾಸ್ತ್ರಾಭ್ಯಾಸ, ನ್ಯಾಯ-ಅಲಂಕಾರಶಾಸ್ತ್ರಗಳಲ್ಲಿ ವಿದ್ವಾನ್ ಪದವಿ, ಎಮ್.ಎ., ರಾಷ್ಟ್ರಮಟ್ಟದ ಸ್ಪರ್ಧೆಗಳಲ್ಲಿ ಸುವರ್ಣಪದಕಗಳು, ದ್ವೈತವೇದಾಂತದ ಪದವೃತ್ತಿವಿಚಾರದ ಮೇಲೆ ಪಿ.ಎಚ್.ಡಿ. - ಇವು ಲೇಖಕರ ಕೆಲ ಶೈಕ್ಷಣಿಕ ಸಾಧನೆಗಳು.

ಈ ಎಲ್ಲಕ್ಕಿಂತ ಮಿಗಿಲಾದದ್ದು ಪರಮಪೂಜ್ಯ ಶ್ರೀ ಶ್ರೀವಿಶ್ವೇಶತೀರ್ಥ ಶ್ರೀಪಾದರಿಂದ ಪಾಠಕೇಳಿ ಪಡೆದ ಶ್ರೀಮನ್ನ್ಯಾಯಸುಧಾಮಂಗಳದ ಅನುಗ್ರಹಪೂರ್ವಕ ರಕ್ಷಾಕವಚ. ಶ್ರೀವಿದ್ಯಾಮಾನ್ಯತೀರ್ಥರು, ಇವರು ನ್ಯಾಯಶಾಸ್ತ್ರವೊಂದರ ಪರೀಕ್ಷೆ ನೀಡಿದಾಗ 'ಉತ್ತಮೋತ್ತಮ'ಎಂಬ ಶ್ರೇಣಿಯನ್ನು ನೀಡಿದ್ದು ಬಹು ಅಪರೂಪದ ಸಾಧನೆ. ಸಣ್ಣ ವಯಸ್ಸಿನಲ್ಲೇ ನ್ಯಾಯ-ವೇದಾಂತಗಳ ಜೊತೆಗೆ ಪೌರೋಹಿತ್ಯ- ಧರ್ಮಶಾಸ್ತ್ರ- ಜ್ಯೋತಿಷ್ಯಗಳಲ್ಲಿ ಆಳವಾದ ಅಧ್ಯಯನವನ್ನು ನಡೆಸಿದ ಅಪರೂಪದ ವಿದ್ವಾಂಸರು. ತಾವು ಪಡೆದದ್ದನ್ನು ಜಿಜ್ಞಾಸುಗಳಿಗೆ ತಲುಪಿಸುವ ಅವರ ಕಳಕಳಿ ಸಮಾಜಕ್ಕೆ ಲಾಭದಾಯಕವಾದರೆ ಇವರಿಗೆ ಜನಸಾಮಾನ್ಯರ ನಾಡಿ ಮಿಡಿತವನ್ನು ಅರಿಯಲು ಸಹಕಾರಿಯಾಗಿದೆ.

ಈ ನಿಟ್ಟಿನಲ್ಲಿ ಉಪನಯನ, ವಿವಾಹ, ವಾರ್ಷಿಕ ಹಬ್ಬಗಳು ಮೊದಲಾದ ವಿಷಯಗಳ ಬಗ್ಗೆ ಸರಳ, ಸ್ಪಷ್ಟ, ಖಚಿತ, ಅಪೇಕ್ಷಿತ ಮಾಹಿತಿಗಳನ್ನೊಳಗೊಂಡ ಲಘು ಪುಸ್ತಕಗಳು ಇವರ ಅನುಭವದ ಮೂಸೆಯಿಂದ ಹೊರಬಂದಿವೆ. ಇವರ ಮಾರ್ಗದರ್ಶನದಲ್ಲಿ ರಚಿತವಾಗಿರುವ 'ಚಿಂಬಾನುಸಂಧಾನ' ಪುಸ್ತಕ ದೇಹದ ಒಳಗಿನ ಷಟ್‌ಚಕ್ರಕಮಲಗಳ ಬಗ್ಗೆ ಬಂದಿರುವ ಪುಸ್ತಕಗಳಲ್ಲಿ ಅಗ್ರಗಣ್ಯವಾಗಿದೆ.

ಪ್ರಕೃತ ಹೋಮಗಳ ಬಗ್ಗೆ ಬಂದಿರುವ ಈ ಪುಸ್ತಕ ಆಸ್ತಿಕವರ್ಗಕ್ಕೆ ಬಹಳ ಪ್ರಯೋಜನಕಾರಿಯಾಗಿದೆ. ಕರ್ಮಗಳನ್ನು ಕರ್ಮಯೋಗದ ಎತ್ತರಕ್ಕೆ ಕೊಂಡೊಯ್ಯುವುದು, ಕರ್ಮಾನುಷ್ಠಾನ ಕಾಲದಲ್ಲಿ ವಹಿಸಬೇಕಾದ ಎಚ್ಚರ, ಅದರಿಂದ ಪಡೆಯುವ ಲಾಭ ಜೊತೆಗೆ ಇರಬೇಕಾದ ಅನುಸಂಧಾನಗಳನ್ನು ಈ ಪುಸ್ತಕ ಎಳೆ-ಎಳೆಯಾಗಿ ತೆರೆದಿಡುತ್ತದೆ.

**ಡಾ॥ ತಿರುಮಲ ಕುಲಕರ್ಣಿ**



**ಡಾ॥ ಹೆಚ್. ಸತ್ಯನಾರಾಯಣಾಚಾರ್ಯ**
ನ್ಯಾಯ-ವೇದಾಂತ-ವ್ಯಾಕರಣ ಪ್ರಾಧ್ಯಾಪಕರು,
ಪೂರ್ಣಪ್ರಜ್ಞವಿದ್ಯಾಪೀಠ, ಬೆಂಗಳೂರು